KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಆಗಸ್ಟ್ ೧೨, ೨೦೧೦ (ಶ್ರಾವಣ ೨೧, ಶಕ ವರ್ಷ ೧೯೩೨) | ಸಂಚಿಕೆ ೩೨ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಸಂಬಂಧಿಸಿದ ಹುದ್ದೆಗಳೊಂದಿಗೆ 2010–11ನೇ ಸಾಲಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ : ಪಸಂಮೀ 42 ಪಪಯೋ 2009, ದಿನಾಂಕ : 25–04–2009

(2) ಆಯುಕ್ತರು ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಬೆಂಗಳೂರು ಇವರ ಪತ್ರ ಸಂಖ್ಯೆ : ಆಪಸಂ/ಯೋ–2/ವಿವ–02/2010–11 ದಿನಾಂಕ : 05–04–2010

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 25–04–2009ರ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಚಾಲ್ತಿಯಲ್ಲಿರುವ ವಿವಿಧ ಯೋಜನೆಗಳನ್ನು ಸಂಬಂಧಿಸಿದ ಹುದ್ದೆಗಳೊಂದಿಗೆ 2009–10ನೇ ಸಾಲಿಗೆ ಮುಂದುವರೆಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 05–04–2010ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಇಲಾಖೆಯ ರಾಜ್ಯವಲಯ ಯೋಜನೆಗಳು, ಕೇಂದ್ರ ಪುರಸ್ಕೃತ ಯೋಜನೆಗಳು, ಡೈರಿ ಅಭಿವೃದ್ಧಿ ಯೋಜನೆಗಳು ಹಾಗು ಬಂಡವಾಳ ಮೇಲಣ ವೆಚ್ಚ ಯೋಜನೆಯನ್ನು 2009–10ನೇ ಸಾಲಿನಲ್ಲಿ ಮುಂದುವರಿಸಲಾಗಿದ್ದು, 2010–11ನೇ ಸಾಲಿನಲ್ಲಿ ರಾಜ್ಯವಲಯದಡಿ ಚಾಲ್ತಿಯಲ್ಲಿರುವ ರಾಜ್ಯ/ಕೇಂದ್ರ ಪುರಸ್ಕೃತ ಯೋಜನೆಗಳೂ ಸೇರಿದಂತೆ ಒಟ್ಟು 33 ಯೋಜನೆಗಳನ್ನು ಮುಂದುವರೆಸುವ ಸಲುವಾಗಿ ಯೋಜನೆಗಳ ಸವಿಸ್ತರವಾದ ಪ್ರಸ್ತಾವನೆಗಳನ್ನು ಒದಗಿಸಿ, ಅವುಗಳನ್ನು 2010–11ನೇ ಸಾಲಿಗೆ ಸಂಬಂಧಿತ ಹುದ್ದೆಗಳೊಂದಿಗೆ ಮುಂದುವರೆಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ ಹಾಗೂ ಈ ಸಾಲಿನಲ್ಲಿ 6 ಹೊಸ ಯೋಜನೆಗಳಿಗೆ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಇಲಾಖಾ ಮುಖ್ಯಸ್ಥರು, ಆರ್ಥಿಕ ಇಲಾಖೆ ಮತ್ತು ಯೋಜನಾ ಇಲಾಖೆಗಳ ಪ್ರತಿನಿಧಿ ಹಾಗೂ ಇತರರನ್ನೊಳಗೊಂಡಂತೆ ದಿನಾಂಕ : 6–4–2010 ರಂದು ಸಭೆ ನಡೆಸಿ ಮೇಲ್ಕಂಡ ಯೋಜನೆಗಳನ್ನು 2010–11ನೇ ಸಾಲಿಗೆ ಮುಂದುವರೆಸುವುದು ಸೂಕ್ತ ಎಂದು ತೀರ್ಮಾನ ಕೈಗೊಳ್ಳಲಾಯಿತು.

**ಸರ್ಕಾರದ ಆದೇಶ ಸಂಖ್ಯೆ : ಪಸಂಮೀ 14 ಪಪಾಯೋ 2010, ಬೆಂಗಳೂರು, ದಿನಾಂಕ : 12–04–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಿವರಗಳ ಹಿನ್ನಲೆಯಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಹಾಗೂ ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಪಶು ಆರೋಗ್ಯ ಮತ್ತು ಜೈವಿಕ ಸಂಸ್ಥೆ, ಕರ್ನಾಟಕ ಸಹಕಾರಿ ಹಾಲು ಉತ್ಪಾದಕರ ಮಹಾ ಮಂಡಳಿ, ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿ, ಹಾಗೂ ಕರ್ನಾಟಕ ಸಹಕಾರ ಕುಕ್ಕುಟ ಮಹಾ ಮಂಡಳಿ, ಕರ್ನಾಟಕ ಪಶುವೈದ್ಯಕೀಯ ಪರಿಷತ್ತು ಈ ಸಂಸ್ಥೆಗಳಲ್ಲಿ ಚಾಲ್ತಿಯಲ್ಲಿರುವ ಕೇಂದ್ರ ವಲಯ, ಕೇಂದ್ರ ಪುರಸ್ಕೃತ ಮತ್ತು ರಾಜ್ಯವಲಯದಲ್ಲಿನ ವಿವಿಧ ಯೋಜನೆಗಳನ್ನು ಸಂಬಂಧಪಟ್ಟ ಹುದ್ದೆಗಳೊಂದಿಗೆ 2010–11ನೇ ಸಾಲಿಗೆ ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಮುಂದುವರೆಸಿ ಆದೇಶಿಸಲಾಗಿದೆ. ಹೀಗೆ

ಮುಂದುವರೆಸಲಾದ ಕೇಂದ್ರ ವಲಯ, ಕೇಂದ್ರ ಪುರಸ್ಕೃತ ಮತ್ತು ರಾಜ್ಯವಲಯದದಲ್ಲಿನ ವಿವಿಧ ಯೋಜನೆಗಳ ವಿವರಗಳು ಈ ಆದೇಶದ ಅನುಬಂಧ – I ರಿಂದ IV ರಲ್ಲಿ ತೋರಿಸಿರುವಂತೆ ಇರುತ್ತದೆ ;

1. ಮುಂದುವರೆಸಲು ಉದ್ದೇಶಿಸಿರುವ ಯೋಜನೆಗಳ ಸಿಬ್ಬಂದಿಯನ್ನು ಹೊಸದಾಗಿ ಸೃಜಿಸುವ ಬಗ್ಗೆ ಹಾಗೂ ಹೊಸ ವಾಹನಗಳ ಖರೀದಿ, ಇತ್ಯಾದಿ ವಿಚಾರಗಳಿಗೆ ಸಂಬಂಧಿಸಿದಂತೆ, ಸರ್ಕಾರಿ ಆದೇಶಗಳ ಸಂಖ್ಯೆ : ಪಿಡಿ 17 ಐಎಂಎಂ 2005, ದಿನಾಂಕ : 10–8–2005, 28–3–2009 ಹಾಗೂ ಪಿಡಿ 5 ಐಎಂಎಂ 2010, ದಿನಾಂಕ : 03–4–2010ರಲ್ಲಿ ಸೃಜಿಸಲಾಗಿರುವ ಸಮಿತಿಗಳ ಮುಂದೆ ಪ್ರತ್ಯೇಕವಾಗಿ ಪ್ರಸ್ತಾವನೆಗಳನ್ನು ಸಲ್ಲಿಸಿ ಸದರಿ ಸಮಿತಿಯ ಅನುಮೋದನೆ ಪಡೆದು, ಸದರಿ ವಿಚಾರದಲ್ಲಿ ಮುಂದಿನ ಸೂಕ್ತ ಕ್ರಮ ತೆಗೆದುಕೊಳ್ಳತಕ್ಕದ್ದು.
2. 2010–11ನೇ ಸಾಲಿಗೆ ಮುಂದುವರೆಸಲಾದ ಯೋಜನೆಗಳಿಗೆ ಅನುದಾನ ಬಿಡುಗಡೆಗೊಳಿಸುವಲ್ಲಿ ಸದರಿ ಮಂಜೂರಾತಿಯು ಈ ಯೋಜನೆಗೆ ಸಂಬಂಧಿಸಿದಂತೆ ಆಯವ್ಯಯದಲ್ಲಿ ನಿಗದಿಪಡಿಸಲಾದ ಮೊತ್ತವನ್ನು ಯಾವುದೇ ಕಾರಣಕ್ಕೂ ಮೀರಕೂಡದು ಹಾಗೂ ಸದರಿ ಕಾರ್ಯಕ್ರಮದಡಿ ಉಪಕರಣಗಳನ್ನು ಖರೀದಿಸುವುದು ಹೊರತುಪಡಿಸಿ ತತ್ಸಂಬಂಧ ಲೆಕ್ಕಶೀರ್ಷಿಕೆಯಲ್ಲಿ ಕಾಣಿಸಿದಂತೆ, ನಿಯಮಾನುಸಾರ ಹಾಗು ರಾಜ್ಯ ಸರ್ಕಾರದ ಮತ್ತು ಭಾರತ ಸರ್ಕಾರದ ಯೋಜನಾ ಮಾರ್ಗಸೂಚಿಗಳಿಗನುಸಾರವೇ ಯೋಜನೆಗಳನ್ನು ಅನುಷ್ಠಾನಗೊಳಿಸಿ ವೆಚ್ಚವನ್ನು ಭರಿಸತಕ್ಕದ್ದು, ವಾಹನಗಳನ್ನು ಖರೀದಿಸಲು ಸರ್ಕಾರ ಅನುಮತಿಸುವುದಿಲ್ಲ, ಕೇಂದ್ರ ಪುರಸ್ಕೃತ, ಕೇಂದ್ರ ವಲಯ ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ, ಯಾವುದೇ ಕಾರಣಕ್ಕೂ ಭಾರತ ಸರ್ಕಾರದ ಯೋಜನಾ ಮಾರ್ಗಸೂಚಿಗಳನ್ನು ಉಲ್ಲಂಘಿಸತಕ್ಕದ್ದಲ್ಲ.
3. 2010–11ನೇ ಸಾಲಿಗೆ ಹಮ್ಮಿಕೊಂಡಿರುವ ಹೊಸ ಯೋಜನೆಗಳನ್ನು ಅನುಷ್ಠಾನಕ್ಕೆ ತರುವ ಮೊದಲು ಸರ್ಕಾರಿ ಆದೇಶ ಸಂಖ್ಯೆ : ಪಿಡಿ 5 ಐಎಂಎಂ 2010, ದಿನಾಂಕ : 03–4–2010ರ ಆದೇಶದಲ್ಲಿ ನಿಗದಿಪಡಿಸಿರುವ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.
4. 2009–10ನೇ ಸಾಲಿನಲ್ಲಿ ಚಾಲ್ತಿಯಲ್ಲಿದ್ದು, 2010–11ನೇ ಸಾಲಿಗೆ ಮುಂದುವರೆಸಲು ಒಪ್ಪಲಾದ ಕೇಂದ್ರ ಪುರಸ್ಕೃತ ಮತ್ತು ಕೇಂದ್ರ ವಲಯ ಯೋಜನೆಗಳನ್ನು 2010–11ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಕೇಂದ್ರ ಸರ್ಕಾರದ ಅನುಮೋದನೆ ಮಂಜೂರಾತಿ ದೊರೆತಿದ್ದಲ್ಲಿ ಮಾತ್ರವೇ ಅಂತಹ ಯೋಜನೆಗಳನ್ನು 2010–11ನೇ ಸಾಲಿಗೆ ಮುಂದುವರೆಸಲಾಗಿದೆ ಎಂದು ಭಾವಿಸಿ, ಅನುಷ್ಠಾನಗೊಳಿಸತಕ್ಕದ್ದು ಹಾಗೂ ಈ ಯೋಜನೆಗಳಿಗೆ ಹಣ ಬಿಡುಗಡೆ ಮಾಡುವ ಬಗ್ಗೆ ಆದೇಶ ಸಂಖ್ಯೆ : ಎಫ್‌ಡಿ 09 ಟಿಎಫ್‌ಪಿ 2004, ದಿನಾಂಕ : 17–8–2004 ಹಾಗೂ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16–05–2008 ರಲ್ಲಿ ಆದೇಶಿಸಿರುವಂತೆ ಕಟ್ಟುನಿಟ್ಟಾಗಿ ಸೂಚನೆಗಳನ್ನು ಪಾಲಿಸತಕ್ಕದ್ದು.
5. ಯೋಜನೆಗಳನ್ನು ಅನುಷ್ಠಾನಗೊಳಿಸುವಲ್ಲಿ ಖರೀದಿ ನಿಯಮಗಳು, ಭಾರತೀಯ ಔಷಧಿ ಮತ್ತು ಸೌಂದರ್ಯವರ್ಧಕ ವಸ್ತುಗಳ ಕಾಯ್ದೆ 1940 ಅನ್ನು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮಗಳು 1999 ಮತ್ತು ನಿಯಮಗಳು 2000 ಅನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
6. 2010–11ನೇ ಸಾಲಿಗೆ ಔಷಧಿ, ರಾಸಾಯನಿಕಗಳು, ಆಸ್ಪತ್ರೆ ಪರಿಕರಗಳನ್ನು ಆಯವ್ಯಯ ಅನುದಾನ ಅವಕಾಶಕ್ಕನುಸಾರ ಹಾಗೂ ಆಯವ್ಯಯ ಮಾರ್ಗಸೂಚಿಗಳು ಮತ್ತು ಮಿತವ್ಯಯ ಆದೇಶಗಳನ್ನು ಪಾಲಿಸುವುದಕ್ಕೊಳಪಟ್ಟು ದರಗುತ್ತಿಗೆದಾರರ ಮೂಲಕ ಕರ್ನಾಟಕ ಸರಕು ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ಮತ್ತು 2000 ಕ್ಕೆ ಒಳಪಟ್ಟು ಅವಶ್ಯ ಔಷಧಿ, ರಾಸಾಯನಿಕಗಳು ಮತ್ತು ಆಸ್ಪತ್ರೆ ಪರಿಕರಗಳನ್ನು ಖರೀದಿಸಲು ಪ್ರತ್ಯಾಯೋಜಿಸಲಾದ ಅಧಿಕಾರಗಳಿಗನುಸಾರವಾಗಿ ತಾಂತ್ರಿಕ ಉಸ್ತುವಾರಿ, ಔಷಧಿ, ರಾಸಾಯನಿಕಗಳು ಹಾಗೂ ಆಸ್ಪತ್ರೆ ಪರಿಕರಗಳ ಖರೀದಿ, ಸರಬರಾಜು ಹಾಗೂ ವಿತರಣೆ ಇವುಗಳನ್ನು ಮಾಡಲು ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಇವರು ಮುಂದಿನ ಕ್ರಮವಹಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ : ಪಿಡಿ 17 ಐಎಂಎಂ 2005, ದಿನಾಂಕ : 10–8–2005, ದಿನಾಂಕ : 28–3–2009 ಮತ್ತು ಪಿಡಿ 5 ಐಎಂಎಂ 2010, ದಿನಾಂಕ : 03–4–2010 ಹಾಗೂ ಆದೇಶ ಸಂಖ್ಯೆ : ಎಫ್ ಡಿ 09 ಟಿಎಫ್‌ಪಿ 2004, ದಿನಾಂಕ : 17–8–2004 ಮತ್ತು ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16–5–2008ಗಳಲ್ಲಿ ಆಡಳಿತ ಇಲಾಖೆಗಳ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ. ಶ್ರೀನಿವಾಸಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ)

## ಅನುಬಂಧ–1

### ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಯೋಜನೆ ಅಡಿಯಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು (ಆನ್ ಗೋಯಿಂಗ್ ಸ್ಕೀಮ್) 2010–2011ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ

ರಾಜ್ಯ ವಲಯ ಯೋಜನೆಗಳು (ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಯೋಜನೆಯ ಹೆಸರು ಹಾಗೂ ಲೆಕ್ಕಶೀರ್ಷಿಕೆ ವಿವರಣೆ | ರಾಜ್ಯದ 09–10ನೇ ಸಾಲಿನ ಆಯವ್ಯಯ (ಬಿಇ) | ರಾಜ್ಯದ 09–10ನೇ ಸಾಲಿನ ಪರಿಷ್ಕೃತ ಆಯವ್ಯಯ | ರಾಜ್ಯದ 2010–2011ನೇ ಸಾಲಿನ ಆಯವ್ಯಯ | ಮಂಜೂರಾದ ಹುದ್ದೆಗಳ ಸಂಖ್ಯೆ ಮತ್ತು ಪದನಾಮ | 2010–2011ನೇ ಸಾಲಿಗೆ ಮುಂದುವರೆಸಲು ಸರ್ಕಾರದ ಆದೇಶಕ್ಕಾಗಿ ಸಮರ್ಥನೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | 2403–00–001–0–01 001–ನಿರ್ದೇಶನ ಮತ್ತು ಆಡಳಿತ 222–ಔಷಧ ಮತ್ತು ರಾಸಯನಿಕಗಳು | 355.00 | 255.00 | 280.00 | – | ಔಷಧಿ ರಸಾಯನಿಕಗಳ ಖರೀದಿ ಹಾಗೂ ತುರ್ತು ಸಂದರ್ಭಗಳಲ್ಲಿ ಜಾನುವಾರು ರೋಗ ಲಸಿಕೆ ಖರೀದಿಗಾಗಿ ಯೋಜಿಸಿದೆ. |
| 2 | 2403–00–101–0–06 06–ಪಶುವೈದ್ಯ ಮತ್ತು ಜಾನುವಾರು ಸಂಸ್ಥೆ ಮತ್ತು ವೈದ್ಯಕೀಯ ಪ್ರಯೋಗ ಶಾಲೆ 101–ಸಹಾಯಾನುದಾನ | 300.00 | 250.00 | 300.00 | – | ಸಹಾಯಾನುದಾನವನ್ನು ರಾಜ್ಯದಲ್ಲಿರುವ ಪಶುವೈದ್ಯಕೀಯ ಸಂಸ್ಥೆಗಳಿಗೆ ಬೇಕಾದ ಜಾನುವಾರು ಮತ್ತು ಕುಕ್ಕುಟ ರೋಗಗಳ ಲಸಿಕೆಗಳನ್ನು ತಯಾರಿಸಿ ಉಚಿತವಾಗಿ ಇಲಾಖೆಗೆ ನೀಡುವುದಕ್ಕಾಗಿ ಯೋಜಿಸಿದೆ. |
| 3 | 2403–00–101–0–18 18–ನಾಗರೀಕ ಕಾಮಗಾರಿಗಳು 101–ಸಹಾಯಾನುದಾನ | 230.00 | 130.00 | 196.00 | – | ಇಲಾಖೆಯ ಕ್ಷೇತ್ರಗಳ/ತರಬೇತಿ/ ಪಶುವೈದ್ಯಕೀಯ ಸಂಸ್ಥೆಗಳ ಕಟ್ಟಡಗಳ ನಿರ್ಮಾಣ, ನಿರ್ವಹಣೆ ಹಾಗೂ ದುರಸ್ತಿಗಾಗಿ ಇತ್ಯಾದಿ. |
| 4 | 2403–00–102–1–06 06–ಜಾನುವಾರು ಸಾಕಾಣೆ ಕ್ಷೇತ್ರಗಳು ಮತ್ತು ತರಬೇತಿ | 115.00 | 115.00 | 100.00 | | ಇಲಾಖೆಗೆ ಸೇರಿದ ಜಾನುವಾರು ಕ್ಷೇತ್ರಗಳ ನಿರ್ವಹಣೆ ಸಾಧನ ಸಾಮಗ್ರಿಗಳ ಪೂರೈಕೆ, ದ್ರವಸಾರಜನಕ ಪೂರೈಕೆ, ವಿದ್ಯುಚ್ಛಕ್ತಿ, ವಾಹನಗಳ ನಿರ್ವಹಣೆ, ಘನಿಕೃತ ವೀರ್ಯ ಉತ್ಪಾದನೆಗೆ ಬೇಕಾದ ಸಾಮಾಗ್ರಿಗಳು, ಸಲಕರಣೆಗಳು, ಹೋರಿಗಳ ಸರಬರಾಜು ಇತ್ಯಾದಿ ವೆಚ್ಚ ಭರಿಸಲು ಯೋಜಿಸಿದೆ. |
| | 051–ಸಾಮಾನ್ಯ ವೆಚ್ಚ | 30.00 | 30.00 | 30.00 | | |
| | 059–ಇತರೆ ವೆಚ್ಚ | 31.00 | 31.00 | 21.00 | | |
| | 071–ಕಟ್ಟಡ ವೆಚ್ಚ | 15.00 | 15.00 | 10.00 | | |
| | 195–ಸಾರಿಗೆ ವೆಚ್ಚ | 11.00 | 11.00 | 11.00 | | |
| | 200–ನಿರ್ವಹಣೆ | 12.00 | 12.00 | 12.00 | | |
| | 221–ಸಾಮಗ್ರಿ ಮತ್ತು ಸರಬರಾಜು | 16.00 | 16.00 | 16.00 | | |
| 5 | 2403–00–102–2–39 39– ಸುವರ್ಣ ಕರ್ನಾಟಕ ಗೋ ಸಂರಕ್ಷಣೆ 101–ಸಹಾಯಾನುದಾನ | 20.00 | 20.00 | 100.00 | – | ದೇಶಿ ತಳಿ ಸಂರಕ್ಷಣೆ ಹಾಗೂ ಅಭಿವೃದ್ಧಿಗಾಗಿ, ಸರ್ಕಾರೇತರ ಸ್ವಯಂ ಸೇವಾ ಸಂಘ ಸಂಸ್ಥೆಗಳ ಮೂಲಕ ಅನುಷ್ಠಾನಗೊಳಿಸಲು ಯೋಜಿಸಿದೆ. |

| | | | | | | |
|---|---|---|---|---|---|---|
| 6 | 2403–00–102–2–40 40–ಮೈಸೂರಿನ ಪಿಂಜರಾಪೋಲ್ ಮತ್ತು ಇತರೆ ಗೋಶಾಲೆಗಳಿಗೆ ಬೆಂಬಲ | 91.00 | 46.00 | 30.00 | – | ರಾಜ್ಯದ ಗೋಶಾಲೆ ಮತ್ತು ಪಿಂಜರಾಪೋಲ್ ನೆರವಿಗಾಗಿ ನಿರ್ವಹಣೆ, ನೀರಿನ ಸರಬರಾಜು, ಮೇವು ಮತ್ತು ಪ್ರಾಣಿ ಆರೋಗ್ಯ ಒದಗಿಸಲು ಯೋಜಿಸಿದೆ. ಸದರಿ ಯೋಜನೆ 2009–10ನೇ ಸಾಲಿನಿಂದ ಅನುಷ್ಠಾನ ಜಾರಿಯಲ್ಲಿದೆ. |
| | 113–ವಿಶೇಷ ಅಭಿವೃದ್ಧಿ ಯೋಜನೆ | – | 46.00 | 30.00 | | |
| | 101–ಸಹಾಯಾನುದಾನ | 30.00 | – | – | | |
| 7 | 2403–00–103–0–19 ಕುಕ್ಕುಟ ಕ್ಷೇತ್ರಗಳನ್ನು ಸ್ಥಾಪಿಸಲು ನಿರುದ್ಯೋಗಿ ಯುವಕರಿಗೆ ಸಹಾಯ | 200.00 | 200.00 | 100.00 | – | ಪ್ರತಿ ತಾಲ್ಲೂಕಿನ ನಿರುದ್ಯೋಗಿ ಯುವಕರು ಹಾಗೂ ಸಣ್ಣ ರೈತರಿಗೆ ಕೋಳಿ ಫಾರಂಗಳನ್ನು ಸ್ಥಾಪಿಸಲು, ನೆರವು ನೀಡಲು ಉದ್ದೇಶಿಸಲಾಗಿದೆ. 2008–09ನೇ ಸಾಲಿನಲ್ಲಿ 2403–00–103–0–18 ಅಡಿ ಮಂಜೂರಾತಿ ನೀಡಿದೆ. 2009–10ನೇ ಸಾಲಿನಲ್ಲಿ ನಿಗದಿಗೊಳಿಸಿರುವ 2403–00–103–0–19ರಲ್ಲಿ ನಿಗದಿಗೊಳಿಸಿದ್ದು, ಸದರಿ ಲೆಕ್ಕ ಶೀರ್ಷಿಕೆಯಲ್ಲಿ ಸಹಾಯಧನ ಶೇ. 33% ಮತ್ತು ಶೇ. 25 ರಷ್ಟು ನೀಡಲಾಗುವುದು. ಯೋಜನೆ ಮುಂದುವರಿಸಲು ಪ್ರಸ್ತಾಪಿಸಿದೆ. |
| | 101–ಸಹಾಯಾನುದಾನ | 155.00 | 55.00 | 54.00 | – | |
| | 422–ವಿಶೇಷ ಘಟಕ ಯೋಜನೆ | 32.00 | 32.00 | 33.00 | – | |
| | 423–ಗಿರಿಜನ ಉಪಯೋಜನೆ | 13.00 | 13.00 | 13.00 | | |
| 8 | 2403–00–104–8–12 12–ಕುರಿ ಮತ್ತು ಕುರಿ ಕಾಯುವವರಿಗೆ ವಿಮಾ ಯೋಜನೆ 101–ಸಹಾಯಾನುದಾನ | – | – | 50.00 | – | ಜನಶ್ರೀ ವಿಮಾ ಯೋಜನೆ 2006–07ನೇ ಸಾಲಿನಲ್ಲಿ ಮಂಜೂರಾತಿ ಮಾಡಲಾಗಿದ್ದು ಕುರಿಗಳ ವಿಮೆಗಾಗಿ ಪ್ರೀಮಿಯಂ ಸಹಾಯಧನ 100000 ಕುರಿಗಳಿಗೆ ನೀಡಲು ಯೋಜಿಸಿದೆ. |
| 9 | 2403–00–104–0–02 02–ಕರ್ನಾಟಕ ಕುರಿ ಮತ್ತು ಕುರಿ ಉತ್ಪನ್ನ ಅಭಿವೃದ್ಧಿ ಮಂಡಳಿ | 500.00 | 250.00 | 1000.00 | | ಕುರಿಗಳ ಆರೋಗ್ಯ ರಕ್ಷಣೆ, ಕ್ಷೇತ್ರಗಳ ನಿರ್ವಹಣೆ ಕೇಂದ್ರಗಳ ಕಟ್ಟಡಗಳ ನಿರ್ವಹಣೆ ತರಬೇತಿ ವಿಸ್ತರಣೆ, ಪ್ರಚಾರ ಕಾರ್ಯಗಳು, ತಳಿ ಅಭಿವೃದ್ಧಿಗಾಗಿ ಟಗರುಗಳ ಪೂರೈಕೆ, ಯಂತ್ರೋಪಕರಣಗಳು ಮತ್ತು ಸಲಕರಣೆಗಳ ಪೂರೈಕೆ ಹಾಗೂ ಹೊಸದಾಗಿ 10+1 ಕುರಿ ವಿತರಣೆ 3600 ಫಲಾನುಭವಿಗಳಿಗೆ ಸಹಾಯಾನುದಾನವಾಗಿ ಯೋಜಿಸಿದೆ. |
| | 101–ಸಹಾಯಾನುದಾನ | 425.00 | 175.00 | 920.00 | – | |
| | 422–ವಿಶೇಷ ಘಟಕ ಯೋಜನೆ | 53.00 | 53.00 | 57.00 | – | |
| | 423–ಗಿರಿಜನ ಉಪಯೋಜನೆ | 22.00 | 22.00 | 23.00 | – | |
| 10 | 2403–00–107–0–07 | 114.00 | 64.00 | 225.00 | – | ಪ್ರತಿ ತಾಲ್ಲೂಕಿನಲ್ಲಿ 50 ಮೇವಿನ ಪ್ಲಾಟ್‌ಗಳ |

| | | | | | | |
|---|---|---|---|---|---|---|
| | 07–ಮೇವು ಅಭಿವೃದ್ಧಿ<br>133–ವಿಶೇಷ ಅಭಿವೃದ್ಧಿ ಯೋಜನೆ | | | | | ಪ್ರತ್ಯಕ್ಷತೆಗಳನ್ನು ಬಹು ವಾರ್ಷಿಕ ಮೇವು ಬೆಳೆ ಬೆಳೆಯಲು ಪ್ರೋತ್ಸಾಹಿಸಲು ಯೋಜಿಸಿದೆ. |
| 11 | 2403–00–109–0–01<br>01–ಪಶುವೈದ್ಯ ಶಿಕ್ಷಣ ಮತ್ತು ತರಬೇತಿ<br>109–ವಿಸ್ತರಣೆ ಮತ್ತು ತರಬೇತಿ<br>200–ನಿರ್ವಹಣೆ | 60.00 | 60.00 | 50.00 | | ಕ್ಷೇತ್ರೋತ್ಸವ ಮಿಶ್ರತಳಿ ಹಸು/ಕರು ಜಾನುವಾರುಗಳ ಪ್ರದರ್ಶನ, ತರಬೇತಿ ಸಂಸ್ಥೆಗಳ ಬಲವರ್ಧನೆ, ದಸರಾ ವಸ್ತು ಪ್ರದರ್ಶನ ಇತ್ಯಾದಿ ರೈತರ ಸಮ್ಮೇಳನ, ಕಾರ್ಯಗಾರರ ಹಾಗೂ ಕಿಯೊಸ್ಕ – ಸ್ಥಾಪನೆ ಇನ್ನಿತರೆ ವಿಸ್ತರಣಾ ಚಟುವಟಿಕೆಗಳನ್ನು ಅನುಷ್ಠಾನಗೊಳಿಸಲು ಯೋಜಿಸಿದೆ. |
| 12 | 2403–00–195–0–01<br>01–ಪಶು ಸಂಗೋಪನೆ ಸಹಕಾರಿ ಸಂಘಗಳಿಗೆ ಅನುದಾನಗಳು | 20.00 | 20.00 | 20.00 | | ಕರ್ನಾಟಕ ಕುಕ್ಕುಟ ಮಹಾ ಮಂಡಳಿಗೆ ಸಹಾಯಾನುದಾನ, ಗಿರಿರಾಜ ಕೋಳಿಮರಿ ಸಾಕಾಣಿಕೆಗಾಗಿ, ಕೋಳಿ ಸಾಕಾಣಿಕೆ ಬಗ್ಗೆ ತರಬೇತಿ/ವಿಸ್ತರಣೆ ಕುಕ್ಕುಟ ಸಹಕಾರ ಸಂಘಗಳ ಸ್ಥಾಪನೆಗಾಗಿ ಇತ್ಯಾದಿ ಹಾಗೂ ಪರಿಶಿಷ್ಟ ಜಾತಿ/ಪಂಗಡ ಕಲ್ಯಾಣ ಕಾರ್ಯಗಳಿಗೆ ಸಹಾಯಧನ ನೀಡಲು ಯೋಜಿಸಿದೆ. |
| | 101–ಸಹಾಯಾನುದಾನ | 16.00 | 16.00 | 16.00 | – | |
| | 422–ವಿಶೇಷ ಘಟಕ ಯೋಜನೆ | 3.00 | 3.00 | 3.00 | – | |
| | 423–ಗಿರಿಜನ ಉಪಯೋಜನೆ | 1.00 | 1.00 | 1.00 | – | |
| 13 | 2403–00–796–0–00<br>423–ಗಿರಿಜನ ಉಪಯೋಜನೆ | 106.00 | 56.00 | 763.00 | – | ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಹೈನುಗಾರಿಕೆ, ಕರು ಸಾಕಾಣಿಕೆ, ಮೇವು ಕತ್ತರಿಸುವ ಯಂತ್ರ ವಿತರಣೆಗೆ ಶೇ. 75 ರಷ್ಟು ಸಹಾಯಧನ ನೀಡಲು ಯೋಜಿಸಿದೆ. |
| 14 | 2403–00–800–0–14<br>14–ವಿಶೇಷ ಘಟಕ ಯೋಜನೆ<br>422–ವಿಶೇಷ ಘಟಕ ಯೋಜನೆ<br>(ರಾಜ್ಯ ಯೋಜನಾ ಕಾರ್ಯಕ್ರಮ) | 72.00 | 72.00 | 684.00 | – | ಪರಿಶಿಷ್ಟ ಜಾತಿಯ ಫಲಾನುಭವಿಗಳಿಗೆ, ಶೇ. 60ರಷ್ಟು ಸಹಾಯಧನ ನೀಡಲು ಯೋಜಿಸಿದೆ 442–ವಿಶೇಷ ಘಟಕ ಯೋಜನೆ ಸಾಮಾನ್ಯ ನಿಧಿಗೆ ವಜಾ ರೂ. 1200.00 ಲಕ್ಷಗಳನ್ನು ಒಟ್ಟುಗೂಡಿಸಿದೆ. ಉಳಿದ ರೂ. 684.00 ಲಕ್ಷಗಳನ್ನು ಫಲಾನುಭವಿ ಆಧರಿಸಿ ವಿನಿಯೋಗಿಸಲಾಗುವುದು. |
| 15 | 2403–00–800–0–22<br>22–ಪಶು ಮತ್ತು ಪ್ರಾಣಿ ವಿಜ್ಞಾನಗಳ ವಿಶ್ವವಿದ್ಯಾಲಯ ಸ್ಥಾಪನೆ | 600.00 | 500.00 | 840.00 | – | ಪಶು ಮತ್ತು ಪ್ರಾಣಿ ವಿಜ್ಞಾನ ವಿಶ್ವವಿದ್ಯಾನಿಲಯ ಮೂಲಭೂತ ಸೌಕರ್ಯಗಳನ್ನು ಹಾಗೂ ಯೋಜನೆಯಡಿ ವೇತನ ಭತ್ಯೆ, ಇನ್ನಿತರೆ ವೆಚ್ಚಗಳನ್ನು ಭರಿಸಲು ಸಹಾಯಾನುದಾನ ಮತ್ತು |

| | | | | | | |
|---|---|---|---|---|---|---|
| | | | | | | ಪರಿಶಿಷ್ಟ ಜಾತಿ/ಪಂಗಡದವರ ಕಲ್ಯಾಣ ಕಾರ್ಯಕ್ಕಾಗಿ ವಿನಿಯೋಗಿಸಲು ಪ್ರಸ್ತಾಪಿಸಿದೆ. |
| | 101–ಸಹಾಯಾನುದಾನ | 455.00 | 355.00 | 535.00 | – | |
| | 422–ವಿಶೇಷ ಘಟಕ ಯೋಜನೆ | 105.00 | 105.00 | 205.00 | – | |
| | 423–ಗಿರಿಜನ ಉಪಯೋಜನೆ | 40.00 | 40.00 | 100.00 | – | |
| 16 | 2403–00–800–0–26<br>26–ಕರ್ನಾಟಕ ಪಶು ವೈದ್ಯಕೀಯ ಸಂಘ<br>101–ಸಹಾಯಾನುದಾನ | 10.00 | 10.00 | 10.00 | | ಪಶು ವೈದ್ಯಕೀಯ ಸಂಘಕ್ಕೆ ಸಹಾಯಾನುದಾನ ನೀಡಲು ಯೋಜಿಸಿದೆ. |
| 17 | 2403–00–800–0–30<br>30–ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ | 3960.00 | 4180.00 | 6780.00 | – | ಹೈನುಗಾರಿಕಾ ಅಭಿವೃದ್ಧಿ, ಕುರಿ ಅಭಿವೃದ್ಧಿ ಕುಕ್ಕುಟ ಅಭಿವೃದ್ಧಿ, ವರಾಹ ಅಭಿವೃದ್ಧಿ, ಜಾನುವಾರು ತಳಿ ಸಂವರ್ಧನೆ ಪಶುವೈದ್ಯ ಸೇವೆ ಒದಗಿಸುವುದು. ಜಾನುವಾರು ಲಸಿಕಾ ಉತ್ಪಾದನೆ, ವಿಸ್ತರಣೆ ಮತ್ತು ತರಬೇತಿಗಾಗಿ ಪಶುವೈದ್ಯಕಿಯ ಕಾಲೇಜುಗಳು ಸೇರಿದಂತೆ ಒಟ್ಟಾರೆ ಮೂಲ ಸ್ವತ್ತು/ಸೌಲಭ್ಯಗಳನ್ನು ಕಟ್ಟಿಸುವುದು ಹಾಗೂ ರೈತರು ಹೆಚ್ಚು ಜಾನುವಾರು (ಹಸು, ಎಮ್ಮೆ, ಕುರಿ, ಮೇಕೆ, ಹಂದಿ, ಕೋಳಿ, ಮೊಲ) ಸಾಕಾಣಿಕೆ ಮಾಡಲು ಹಾಗೂ ಜಾನುವಾರು ಉತ್ಪನ್ನಗಳನ್ನು ಉತ್ಪಾದಿಸಲು ಪ್ರೋತ್ಸಾಹ ನೀಡಲಾಗುವುದು. |
| | 101–ಸಹಾಯಾನುದಾನ | 3060.00 | 3280.00 | 6780.00 | – | |
| | 422–ವಿಶೇಷ ಘಟಕ ಯೋಜನೆ | 640.00 | 640.00 | – | – | |
| | 423–ಗಿರಿಜನ ಉಪಯೋಜನೆ | 260.00 | 260.00 | – | | |
| 18 | 2403–00–800–0–33<br>33–ಜಾನುವಾರು ಮತ್ತು ಎಮ್ಮೆ ಅಭಿವೃದ್ಧಿ ಕೃ.ಗ. ಕೇಂದ್ರ<br>133–ವಿಶೇಷ ಅಭಿವೃದ್ಧಿ ಯೋಜನೆ | 200.00 | 100.00 | 300.00 | – | ಉತ್ತರ ಕರ್ನಾಟಕದ ಹಿಂದುಳಿದ 8 ಜಿಲ್ಲೆಗಳಲ್ಲಿ ಜಾನುವಾರು ತಳಿ ಅಭಿವೃದ್ಧಿಗಾಗಿ ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಸರ್ಕಾರೇತರ ಸಂಸ್ಥೆಗಳ ಮೂಲಕ ಸ್ಥಾಪಿಸಲು ಯೋಜಿಸಿದೆ. |
| 19 | 2403–00–800–0–36<br>26 – ಪಶು ವಿಮೆ<br>059–ಇತರೆ ಖರ್ಚು | 300.00 | 150.00 | 5.00 | – | ಕೇಂದ್ರ ಸರ್ಕಾರ ಮಂಜೂರಾತಿ ಮಾಡಿದ ಜಿಲ್ಲೆ ಹೊರತುಪಡಿಸಿದ ಜಿಲ್ಲೆಗಳಲ್ಲಿ ಜಾನುವಾರುಗಳಲ್ಲಿ ಹಸು ವಿಮೆಗಳ ವಿಮೆಗಾಗಿ ಶೇ. 50% ವಿಮೆ ಪ್ರೀಮಿಯಂಗೆ ಸಹಾಯಧನ ನೀಡಿ ವಿಮೆ ಮಾಡಿಸಲು ಯೋಜಿಸಿದೆ. ಹೊಸ ಯೋಜನೆ ಅಥವಾ ಮುಂದುವರೆದ ಯೋಜನೆ ಎಂಬ ಬಗ್ಗೆ ಸ್ಪಷ್ಟೀಕರಿಸಬೇಕಿದೆ. |

| | | | | | | |
|---|---|---|---|---|---|---|
| 20 | 2403–00–800–0–37<br>37–ಅಮೃತ್ ಮಹಲ್ ಕಾವಲ್<br>059– ಇತರೆ ಖರ್ಚು | 500.00 | 250.00 | 500.00 | – | ಚಿಕ್ಕಮಗಳೂರು, ಚಿತ್ರದುರ್ಗ, ತುಮಕೂರು ಮತ್ತು ಹಾಸನ ಜಿಲ್ಲೆಗಳಲ್ಲಿರುವ ಅಮೃತ್ ಮಹಲ್ ಕಾವಲು ಪ್ರದೇಶದಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಇಲಾಖಾ ವತಿಯಿಂದ ಕೈಗೊಳ್ಳಲು ಉದ್ದೇಶಿಸಲಾಗಿದೆ. ಹೊಸ ಯೋಜನೆ ಅಥವಾ ಮುಂದುವರೆದ ಯೋಜನೆ ಎಂಬ ಬಗ್ಗೆ ಸ್ಪಷ್ಟೀಕರಿಸಬೇಕಿದೆ. |
| | ಒಟ್ಟು | 7753.00 | 6728.00 | 12333.00 | – | |

**4403 ಪಶು ಸಂಗೋಪನೆಯ ಮೇಲಣ ಬಂಡವಾಳ ವೆಚ್ಚ**

| 1 | 2 | 3 | 4 | 5 | 6 | 7 |
|---|---|---|---|---|---|---|
| 1 | 4403–00–101–0–02<br>101–ಪಶು ಸಂಗೋಪನೆ ಮೇಲಿನ ಬಂಡವಾಳ ವೆಚ್ಚ<br>02–ಆರ್.ಐ.ಡಿ.ಎಫ್ ಯೋಜನೆಯಡಿ ಔಷಧಾಲಯಗಳ ನಿರ್ಮಾಣ | 1300.00 | 1300.00 | 1300.00 | | ಪಶು ವೈದ್ಯಕೀಯ, ಸಂಸ್ಥೆಗಳ ಕಟ್ಟಡ ನಿರ್ಮಾಣ ಆರ್.ಐ.ಡಿ.ಎಫ್. ಯೋಜನೆ ಅನುಸಾರ ನಬಾರ್ಡ್ ಸಂಸ್ಥೆ ನೆರವಿನೊಂದಿಗೆ ನಿರ್ಮಾಣ ಮಾಡಲು ಪ್ರಸ್ತಾಪಿಸಿದೆ. |
| | 436–ನಬಾರ್ಡ್ ಕಾಮಗಾರಿಗಳು | – | – | 1000.00 | – | |
| | 422–ವಿಶೇಷ ಘಟಕ ಯೋಜನೆ | – | – | 200.00 | – | |
| | 423– ಗಿರಿಜನ ಉಪಯೋಜನೆ | – | – | 100.00 | – | |
| 2 | 4403–00–101–0–04<br>04–ಪಶು ವೈದ್ಯಕೀಯ ಕಾಲೇಜು, ಶಿವಮೊಗ್ಗ | 1307.00 | 1307.00 | 1000.00 | | ಶಿವಮೊಗ್ಗದಲ್ಲಿನ ಪಶುವೈದ್ಯ ಕಾಲೇಜು ಮೂಲಭೂತ ಸೌಲಭ್ಯಗಳನ್ನು ಅಭಿವೃದ್ಧಿಪಡಿಸಲು ಪ್ರಧಾನ ಕಾಮಗಾರಿ ಕೈಗೊಳ್ಳಲು ಪ್ರಸ್ತಾಪಿಸಿದೆ. ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ111:ಪಅಸೇ:07 ದಿ:17–9–07 ರಂತೆ ಮಂಜೂರಾತಿ ನೀಡಿದೆ. ಮೂಲಭೂತ ಸೌಕರ್ಯ ಒದಗಿಸಲು ಯೋಜನೆ ರೂ:1000.00 ಲಕ್ಷಗಳ ಕಾಮಗಾರಿಗಾಗಿ ಪ್ರಸ್ತಾಪಿಸಿದೆ. |
| | 139–ಪ್ರಧಾನ ಕಾಮಗಾರಿಗಳು | 1006.00 | 1006.00 | 1000.00 | – | |
| | 422–ವಿಶೇಷ ಘಟಕ ಯೋಜನೆ | 216.00 | 216.00 | – | – | |
| | 423–ಗಿರಿಜನ ಉಪಯೋಜನೆ | 85.00 | 85.00 | – | – | |
| 3 | 4403–00–101–0–09<br>09–ಹಾಸನದಲ್ಲಿ ಪಶುವೈದ್ಯ ಕಾಲೇಜು | 1000.00 | 1000.00 | 1000.00 | – | ಹಾಸನದಲ್ಲಿ ಪಶುವೈದ್ಯ ಕಾಲೇಜಿನ ಮೂಲಭೂತ ಸೌಕರ್ಯವನ್ನು ಒದಗಿಸಲು ಯೋಜಿಸಿದೆ. ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ:32:ಪಅಸೇ:07 ದಿ: 14–5–2007 ರಂತೆ ಹಾಸನದಲ್ಲಿ ಹೊಸ ಪಶುವೈದ್ಯಕೀಯ ಕಾಲೇಜು ಪ್ರಾರಂಭಿಸಲು ಆಡಳಿತಾತ್ಮಕ |
| | 059–ಇತರೆ ಖರ್ಚು | 776.00 | 776.00 | 1000.00 | – | |
| | 422–ವಿಶೇಷ ಘಟಕ ಯೋಜನೆ | 160.00 | 160.00 | – | – | |
| | 423–ಗಿರಿಜನ ಉಪಯೋಜನೆ | 64.00 | 64.00 | – | – | |

| | | | | | | |
|---|---|---|---|---|---|---|
| | | | | | | ಮಂಜೂರಾತಿ ನೀಡಿದ್ದು, ಸದರಿ ಮುಂದುವರೆದ ಕಾರ್ಯಕ್ರಮಕ್ಕೆ ಮೂಲಭೂತ ಸೌಕರ್ಯವನ್ನು ಒದಗಿಸಲು ಯೋಜಿಸಿದೆ. |
| | ಒಟ್ಟು : | 3607.00 | 3607.00 | 3300.00 | – | |

2404–ಡೈರಿ ಅಭಿವೃದ್ಧಿ

191–ಸಹಕಾರಿ ಮತ್ತು ಇತರೆ ಸಂಸ್ಥೆಗಳಿಗೆ ನೆರವು

1–ಕರ್ನಾಟಕ ಹಾಲು ಉತ್ಪಾದಕರ ಸಹಕಾರ ಮಹಾ ಸಂಘ ನಿಯಮಿತ

**2–ಪಶು ಆರೋಗ್ಯ ಮತ್ತು ಪಶುವೈದ್ಯ ಜೀವ ವಿಜ್ಞಾನ ಸಂಸ್ಥೆ**

| ಕ್ರಮ ಸಂಖ್ಯೆ | ಯೋಜನೆಯ ಹೆಸರು ಹಾಗೂ ಲೆಕ್ಕ ಶೀರ್ಷಿಕೆ ವಿವರಣೆ | 2009–2010ನೇ ಸಾಲಿನ ಪರಿಷ್ಕೃತ ಆಯವ್ಯಯ | | | 2010–2011ನೇ ಸಾಲಿನ ಆಯವ್ಯಯ | | | ಮಂಜೂರಾದ ಹುದ್ದೆಗಳ ಸಂಖ್ಯೆ ಮತ್ತು ಪದ ನಾಮ | ಷರಾ |
|---|---|---|---|---|---|---|---|---|---|
| | | ಕೇಂದ್ರ | ರಾಜ್ಯ | ಒಟ್ಟು | ಕೇಂದ್ರ | ರಾಜ್ಯ | ಒಟ್ಟು | | |
| 1 | 2 | 3 | 4 | 5 | 6 | 7 | 8 | 9 | 10 |
| 1 | 2404–00–191–1–11 (ಕೇಂದ್ರ 100%) ಶುದ್ಧ ಮತ್ತು ಗುಣಮಟ್ಟದ ಹಾಲು ಉತ್ಪಾದನೆಗೆ ಮೂಲಭೂತ ಸೌಕರ್ಯಗಳ ಬಲವರ್ಧನೆ 059–ಇತರೆ ಖರ್ಚು | 150.00 100.00 ಆರ್ಇ | – | 150.00 100.00 ಆರ್ಇ | 2000.00 | | 2000.00 | | ಶುದ್ಧ ಹಾಲು ಹಾಗೂ ಗುಣಮಟ್ಟದ ಹಾಲು ಉತ್ಪಾದನೆಗಾಗಿ ಮೂಲ ಭೂತ ಸೌಕರ್ಯಗಳ ಬಲವರ್ಧನೆಗಾಗಿ ಸಹಾಯಾನುದಾನ ಕೆ.ಎಂ.ಎಫ್. ಅನುಷ್ಠಾನಕ್ಕಾಗಿ |
| 2 | 2404–00–191–1–15 15–ಹೈನುಗಾರಿಕೆ ವಿಜ್ಞಾನ ಕಾಲೇಜು | – | 50.00 | 50.00 | – | 50.00 | 50.00 | | ಗುಲ್ಬರ್ಗಾದಲ್ಲಿ ಹೈನುಗಾರಿಕೆಗೆ ಕಾಲೇಜಿನ ನಿರ್ವಹಣೆ ಹಾಗೂ ಇತರೆ ವೆಚ್ಚಗಳಿಗೆ ಯೋಜಿಸಿದ್ದು, ಮುಂದುವರಿಸಲು ಪ್ರಸ್ತಾಪಿಸಿದೆ. |
| | 059–ಇತರೆ ಖರ್ಚು | – | – | – | – | 50.00 | 50.00 | | |
| | 133–ವಿಶೇಷ ಅಭಿವೃದ್ಧಿ ಯೋಜನೆ | – | 50.00 | 50.00 | – | – | – | | |
| 3 | 2404–00–191–1–16 16–ಮಹಿಳೆಯರಿಗಾಗಿ ಹೈನುಗಾರಿಕೆ ಕಾರ್ಯಕ್ರಮ | – | 1085.00 | 1085.00 | | 830.00 | 830.00 | | ವಿಧವೆಯರು ಹಾಗೂ ದೇವದಾಸಿಯರು ಗೌರವಯುತ ಜೀವನ ನಡೆಸಲು ಅನುವಾಗುವಂತೆ |

| | | | | | | | | | |
|---|---|---|---|---|---|---|---|---|---|
| | 059-ಇತರೆ ವೆಚ್ಚ- | – | 750.00 | 750.00 | | 640.00 | 640.00 | – | ಹೈನುಗಾರಿಕೆ ಕೈಗೊಳ್ಳಲು ಸಹಾಯಧನ ನೀಡಲು ಹಾಗೂ ಪರಿಶಿಷ್ಟ ಜಾತಿ ಹಾಗೂ ಗಿರಿಜನರಿಗೆ ಹೈನುಗಾರಿಕೆಗಾಗಿ ಶೇ. 60 ಹಾಗು 75% ಕ್ರಮವಾಗಿ ಸಹಾಯಧನ ನೀಡಿ ಕಾರ್ಯಕ್ರಮ ಅನುಷ್ಠಾನಗೊಳಿಸಲು ಆರ್ಥಿಕ ಸ್ವಾವಲಂಬನೆಗೆ ಯೋಜಿಸಿದೆ. |
| | 422-ವಿಶೇಷ ಘಟಕ ಯೋಜನೆ- | – | 289.00 | 289.00 | | 135.00 | 135.00 | – | |
| | 423-ಗಿರಿಜನ ಉಪಯೋಜನೆ- | – | 46.00 | 46.00 | | 55.00 | 55.00 | – | |
| | 442-ವಜಾ ವಿ.ಘ.ಯೋ ಸಾಮಾನ್ಯ ನಿಧಿ-(-200.00) | – | – | – | – | – | – | – | |
| 4 | 2404-00-191-1-17 17-ಹಾಲು ಉತ್ಪಾದಕರಿಗೆ ಉತ್ತೇಜನ | – | 27500.00 | 27500.00 | – | 20265.00 | 20265.00 | | ಹಾಲು ಉತ್ಪಾದಕರ ಸಹಕಾರಿ ಸಂಘಗಳಿಗೆ ಹಾಲು ಸರಬರಾಜು ಮಾಡುವ ರೈತರಿಗೆ ಪ್ರತಿ ಲೀಟರ್ ಹಾಲಿಗೆ ರೂ:2/- ರಂತೆ ಪ್ರೋತ್ಸಾಹಕರ ಧನ ನೀಡಲು ಯೋಜಿಸಿದೆ. |
| | 059-ಇತರೆ ವೆಚ್ಚ- | – | – | 24031.00 | – | 16101.00 | 16101.00 | | |
| | 422-ವಿಶೇಷ ಘಟಕ ಯೋಜನೆ- | – | – | 2354.00 | | 3052.00 | 3052.00 | | |
| | 423-ಗಿರಿಜನ ಉಪಯೋಜನೆ- | – | – | 1115.00 | – | 1012.00 | 1012.00 | | |
| | 113-ವಿಶೇಷ ಅಭಿವೃದ್ಧಿ ಯೋಜನೆ | – | – | – | – | 100.00 | 100.00 | | |
| 5 | 2404-00-191-1-18 18-ಗುಲ್ಬರ್ಗಾ ಮತ್ತು ಬೀದರ್‌ಗಳಲ್ಲಿ ಹಾಲು ಒಕ್ಕೂಟಗಳು | – | 400.00 | 400.00 | – | 350.00 | 350.00 | | ಗುಲ್ಬರ್ಗಾ ಮತ್ತು ಬೀದರ್ ಜಿಲ್ಲೆಗಳಲ್ಲಿ ಡೈರಿ ಚಟುವಟಿಕೆಗಳನ್ನು ಅಭಿವೃದ್ಧಿಪಡಿಸಲು ಅಲ್ಲಿನ ಹಾಲಿನ ಒಕ್ಕೂಟಗಳಿಗೆ ಬೆಂಬಲ ನೀಡಲು ಯೋಜಿಸಿದೆ ಹಾಗೂ ಪರಿಶಿಷ್ಠ ಜಾತಿ/ಪಂಗಡದ ರೈತರ ಕಲ್ಯಾಣ ಕಾರ್ಯಕ್ರಮಕ್ಕಾಗಿ ಸಹ ಯೋಜಿಸಿದೆ. |
| | 113-ವಿಶೇಷ ಅಭಿವೃದ್ಧಿ ಯೋಜನೆ | – | 310.00 | 310.00 | – | 350.00 | 350.00 | | |
| | 422-ವಿಶೇಷ ಘಟಕ ಯೋಜನೆ- | – | 65.00 | 65.00 | – | – | – | | |
| | 423-ಗಿರಿಜನ ಉಪಯೋಜನೆ- | – | 25.00 | 25.00 | – | – | – | | |

| | | | | | | | | | |
|---|---|---|---|---|---|---|---|---|---|
| 6 | 2404–00–191–2–09 ಡೈರಿ ಮೂಲಭೂತ ಸೌಲಭ್ಯ 059–ಇತರೆ ಖರ್ಚು | – | 500.00 (ಬಿಇ) 100.00 ಆರ್.ಇ.) | 500.00 (ಬಿಇ) 100.00 ಆರ್.ಇ.) | – | 2000.00 | 2000.00 | – | ಗುಲ್ಬರ್ಗಾ ಮತ್ತು ಬೆಳಗಾವಿ ವಿಭಾಗಗಳಲ್ಲಿ ಶೀಥಲೀಕರಣ ಘಟಕ ಸ್ಥಾಪಿಸಲು ರೂ:10.00 ಕೋಟಿ ಹಾಗೂ ಚಿಕ್ಕಬಳ್ಳಾಪುರದಲ್ಲಿ ಹಾಲಿನ ಸಂಸ್ಕರಣಾ ಘಟಕ ಸ್ಥಾಪನೆಗಾಗಿ ರೂ: 10.00 ಕೋಟಿ ಒದಗಿಸಲು ಯೋಜಿಸಿದೆ. |
| | ಒಟ್ಟು : | 150.00 | 29535.00 29135.00 (ಆರ್ಇ) | 29685.00 29285.00 (ಆರ್ಇ) | 2000.00 | 23495.00 | 25495.00 | | |

**ಕೇಂದ್ರ ಪುರಸ್ಕೃತ ಯೋಜನೆಗಳು**

| ಕ್ರ. ಸಂ. | ಯೋಜನೆಯ ಹೆಸರು ಹಾಗೂ ಲೆಕ್ಕ ಶೀರ್ಷಿಕೆ ವಿವರಣೆ | 2009–2010ನೇ ಸಾಲಿನ ಪರಿಷ್ಕೃತ ಆಯವ್ಯಯ | | | 2010–2011ನೇ ಸಾಲಿನ ಆಯವ್ಯಯ | | | ಮಂಜೂರಾದ ಹುದ್ದೆಗಳ ಸಂಖ್ಯೆ ಮತ್ತು ಪದನಾಮ | 2008–09ನೇ ಸಾಲಿಗೆ ಮುಂದುವರೆಸಲು ಸರ್ಕಾರದ ಆದೇಶಕ್ಕಾಗಿ ಸಮರ್ಥನೆ |
|---|---|---|---|---|---|---|---|---|---|
| | | ಕೇಂದ್ರ | ರಾಜ್ಯ | ಒಟ್ಟು | ಕೇಂದ್ರ | ರಾಜ್ಯ | ಒಟ್ಟು | | |
| 1 | 2 | 3 | 4 | 5 | 6 | 7 | 8 | 9 | 10 |
| | 100% ಕೇಂದ್ರ ನೆರವು | | | | | | | | |
| 1 | 2403–00–101–0–04<br>04–ದೊಡ್ಡರೋಗ ನಿವಾರಣೆಗಾಗಿ ಕಾವಲ ಮತ್ತು ಅದರ ಸಂಪೂರ್ಣ ನಿರ್ಮೂಲನೆಗಾಗಿ ಚುಚ್ಚು ಮದ್ದು ಹಾಕುವ ಕಾರ್ಯಕ್ರಮ | 20.01 | 15.00 | 35.01 | 20.00 | 12.00 | 32.00 | ಸಹಾಯಕ ನಿರ್ದೇಶಕರು–1 ವಾಹನ ಚಾಲಕರು –6 ಒಟ್ಟು–7 | ದೊಡ್ಡರೋಗ ಕಣ್ಗಾವಲಿಗಾಗಿ ಬೇಕಾದ ಅಗತ್ಯ ಪ್ರಚಾರ ಸಾಮಾಗ್ರಿ ರಕ್ತ ಮಾದರಿ ಸಂಗ್ರಹಣೆಗಳು ಪಿ.ಪಿ.ಆರ್. ಲಸಿಕೆ ಸಂಗ್ರಹಣೆ ಹಾಗೂ ಚುಚ್ಚು ಮದ್ದುಗಳನ್ನು ಹಾಕಲು ಸಲಕರಣೆಗಳು ಹಾಗೂ ಉಪಕರಣ ಖರೀದಿ ರಾಜ್ಯ ಅನುದಾನದಲ್ಲಿ ವೇತನ, ಸಾರಿಗೆ ವೆಚ್ಚ ಇನ್ನಿತರೆ ವೆಚ್ಚಗಳು ಇತ್ಯಾದಿಗಾಗಿ |
| | 002–ವೇತನ – ಅಧಿಕಾರಿಗಳು | | | 2.65 | | | 2.82 | | |
| | 003–ವೇತನ ಸಿಬ್ಬಂದಿ | | | 0.82 | | | 2.05 | | |

| | | | | | | | | | |
|---|---|---|---|---|---|---|---|---|---|
| | 011–ತುಟ್ಟಿಭತ್ಯೆ | | | 1.32 | | | 2.43 | | ವೆಚ್ಚ ಭರಿಸಲು ಯೋಜಿಸಿದೆ. |
| | 014–ಇತರೆ ಭತ್ಯೆ | | | 0.66 | | | 1.60 | | |
| | 051–ಸಾಮಾನ್ಯ ವೆಚ್ಚಗಳು | | | 24.55 | | | 19.93 | | |
| | 041–ಪ್ರಯಾಣ ವೆಚ್ಚ | | | 2.00 | | | 2.15 | | |
| | 020–ವೈದ್ಯಕೀಯ ಭತ್ಯೆ | | | 0.01 | | | 0.02 | | |
| | 195–ಸಾರಿಗೆ ವೆಚ್ಚಗಳು | | | 3.00 | | | – | | |
| | 021–ವೈದ್ಯಕೀಯ ವೆಚ್ಚದ ಮರುಪಾವತಿ | | | – | | | 1.00 | | |
| 2 | 2403–00–101–0–28<br>28–ಕಾಲು ಬಾಯಿ ಜ್ವರ ರೋಗ ನಿಯಂತ್ರಣ<br>051–ಇತರೆ ಖರ್ಚು | – | – | 50.00 | – | – | 5.00 | | ಆಯ್ದ 5 ಜಿಲ್ಲೆಗಳಾದ ಬೆಂಗಳೂರು ನಗರ, ಬೆಂಗಳೂರು ಗ್ರಾಮೀಣ, ರಾಮನಗರ, ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಕಾಲುಬಾಯಿ ರೋಗ ನಿಯಂತ್ರಿಸಲು ರೋಗರಹಿತ ವಲಯ ಸ್ಥಾಪಿಸಲು ಯೋಜಿಸಿದೆ. |
| 3 | 2403–00–113–0–04<br>04–ಪಶು ಸಂಗೋಪನೆ ಸಂಖ್ಯಾ ಸಂಗ್ರಹ ಮತ್ತು ಪಶು ಸಂಪತ್ತಿನ ಗಣತಿ (100 ಕೇಂದ್ರ) | 391.17 | | 391.17 | 250.00 | | 250.00 | | ಜಾನುವಾರು ಗಣತಿದಾರರು ಹಾಗೂ ಇನ್ನಿತರ ಅಧಿಕಾರಿಗಳಿಗೆ ಗೌರವ ಧನ ಪಾವತಿಸಲು, ಗಣಕಯಂತ್ರಗಳ ಖರೀದಿಗಾಗಿ, ಅಂಕಿ ಅಂಶಗಳು : ಮುದ್ರಣ ಮತ್ತು ಪ್ರಚಾರಕ್ಕಾಗಿ ಯೋಜಿಸಿದೆ. |
| | 051–ಸಾಮಾನ್ಯ ವೆಚ್ಚಗಳು | | | 96.16 | | | 100.00 | | |
| | 015–ಪೂರಕ ವೆಚ್ಚಗಳು | | | 295.00 | | | 150.00 | | |
| 4 | 2403–00–107–0–06<br>06–ಪುಷ್ಟಿದಾಯಕ ಮೇವಿನ ಕಾರ್ಯಕ್ರಮದ ಪ್ರಾತ್ಯಕ್ಷತೆ (ಕೇಂದ್ರ | 200.00 (100 ಬಿಇ) | | 200.00 (100 ಬಿಇ) | 100.00 | | 100.00 | | ಕ್ಷೇತ್ರಗಳಲ್ಲಿ ಹುಲ್ಲುಗಾವಲು ಅಭಿವೃದ್ಧಿಪಡಿಸಲು ಹಾಗೂ ಮೇವಿನ ಬೀಜದ ಉತ್ಪಾದನೆ ಹಾಗೂ ವಿತರಣೆ ಮೂಲಕ ಈ ಯೋಜನೆ |

| | | | | | | | | | |
|---|---|---|---|---|---|---|---|---|---|
| | 100%)<br>101–<br>ಸಹಾಯಾನುದಾನ | | | | | | | | ಅನುಷ್ಠಾನಗೊಳಿಸಲು ಯೋಜಿಸಿದ್ದು, ಪ್ರಸಕ್ತ ಸಾಲಿನಲ್ಲಿ ಮುಂದುವರೆಸಲು ಪ್ರಸ್ತಾಪಿಸಲಾಗಿದೆ. |
| | **ಕೇಂದ್ರ ಪುರಸ್ಕೃತ ಯೋಜನೆಗಳು ಕೇಂದ್ರ 50: ರಾಜ್ಯ 50%** | | | | | | | | |
| 5 | 2403–00–101–0–17<br>17–ರಾಜ್ಯ ಪಶುವೈದ್ಯಕೀಯ ಪರಷತ್ತಿನ ಸ್ಥಾಪನೆಗಾಗಿ ಕೇಂದ್ರ ಪುರಸ್ಕೃತ ಯೋಜನೆ<br>101–ಸಹಾಯಾನು ದಾನ | 25.00 | 25.00 | 50.00 | 25.00 | 25.00 | 50.00 | ಸಹಾ ಯಾನು ದಾನ | ನಿರ್ವಹಣೆ, ಮಾನವ ಸಂಪನ್ಮೂಲ ಅಭಿವೃದ್ಧಿ, ವೃತ್ತಿ ನೈಪುಣ್ಯತೆ ಅಭಿವೃದ್ಧಿ, ತರಬೇತಿ, ವಿಚಾರ ಸಂಕೀರಣಗಳು ಮೂಲಭೂತ ಸೌಕರ್ಯಗಳು ಇತ್ಯಾದಿಗಳ ವೆಚ್ಚ ಭರಿಸಲು ಯೋಜಿಸಿದೆ. |
| 6 | 2403–00–113–0–02<br>02–ಮಾದರಿ ಸಮೀಕ್ಷಾ ಯೋಜನೆ –ಹಾಲು, ಮೊಟ್ಟೆ ಮತ್ತು ಉಣ್ಣೆ | 50.06 | 50.07 | 100.13 | 65.00 | 65.00 | 130.00 | ಆಡಳಿತ ಸಹಾಯ ಕರು–1 ಸಹಾ ಯಕ ಸಾಂಖ್ಯಿಕ ಅಧಿಕಾರಿ ಗಳು–6 ಸಾಂಖ್ಯಿಕ ನಿರೀಕ್ಷ ಕರು–4 ಶೀಘ್ರ ಲಿಪಿ ಗಾರರು – 1 ಬೆರಳಚ್ಚು ಗಾರರು – 4 ಪಶು ವೈದ್ಯ ಕೀಯ ಸಹಾಯ ಕರು–44 ಪ್ರಥಮ ದರ್ಜೆ ಸಹಾಯ ಕರು–4 ವಾಹನ ಚಾಲಕ –1 ಡಿ–ದರ್ಜೆ–4 ಒಟ್ಟು–69 | ಮಾದರಿ ಸಮೀಕ್ಷೆ ಯೋಜನೆ ಹಾಲು, ಮೊಟ್ಟೆ, ಮಾಂಸ ಹಾಗೂ ಉಣ್ಣೆ ಉತ್ಪಾದನೆ ಅಂದಾಜುಗಳನ್ನು ಗ್ರಾಮಮಟ್ಟದಲ್ಲಿ ಸಮೀಕ್ಷೆ ನಡೆಸಿ, ಜಿಲ್ಲಾ ಹಾಗೂ ರಾಜ್ಯ ಮಟ್ಟದಲ್ಲಿ ಅಂತಿಮಗೊಳಿಸಿ ರಾಜ್ಯ ಸರ್ಕಾರ ಕೇಂದ್ರ ಸರ್ಕಾರಕ್ಕೆ ಕಳುಹಿಸಲು ಹಾಗೂ 69 ಅಧಿಕಾರಿ ಮತ್ತು ಸಿಬ್ಬಂದಿ ವೇತನ ಮತ್ತು ಇನ್ನಿತರೆ ವೆಚ್ಚಗಳಿಗಾಗಿ ಮುಂದುವರೆಸಲು ಪ್ರಸ್ತಾಪಿಸಲಾಗಿದೆ. |
| | 003–ವೇತನ ಸಿಬ್ಬಂದಿ– | | | 48.90 | | | 55.30 | | |
| | 011–ತುಟ್ಟಿ ಭತ್ಯೆ– | | | 18.58 | | | 27.65 | | |
| | 014–ಇತರೆ ಭತ್ಯೆ– | | | 5.86 | | | 9.63 | | |
| | 051–ಸಾಮಾನ್ಯ ವೆಚ್ಚ– | | | 20.53 | | | 28.12 | | |
| | 020–ವೈದ್ಯಕೀಯ ಭತ್ಯೆ | | | 0.26 | | | 0.30 | | |
| | 041–ಪ್ರಯಾಣ ವೆಚ್ಚಗಳು | | | 3.00 | | | 5.00 | | |
| | 195–ಸಾರಿಗೆ ವೆಚ್ಚಗಳು | | | 3.00 | | | 3.00 | | |
| | 021–ವೈದ್ಯಕೀಯ ವೆಚ್ಚದ ಮರುಪಾವತಿ | | | – | | | 1.00 | | |

| | | | | | | | | | |
|---|---|---|---|---|---|---|---|---|---|
| | **ಕೇಂದ್ರ ಪುರಸ್ಕೃತ ಯೋಜನೆಗಳು ಕೇಂದ್ರ 75: ರಾಜ್ಯ 25%** | | | | | | | | |
| 7 | ಅ) ರಾಜ್ಯವಲಯ : 2403–00–101–0–21 21–ಜಾನುವಾರು ರೋಗಗಳ ನಿಯಂತ್ರಣ (ಆಸ್ಕಾಡ್) | 735.03 | 65.67 | 800.00 | 651.00 | 275.00 | 926.00 | ಉಪ ನಿರ್ದೇಶಕರು –3 ಸಹಾಯಕ ನಿರ್ದೇಶಕರು–4 ಪಶು ವೈದ್ಯಕೀಯ ಪರೀಕ್ಷಕರು–2 ಅಧೀಕ್ಷಕರು–1 ಪ್ರ.ದ.ಸ. –2 ದ್ವಿ.ದ.ಸ. –1 ಶೀಘ್ರ ಲಿಪಿಗಾರರು –1 ಬೆರಳಚ್ಚುಗಾರರು –1 ವಾಹನ ಚಾಲಕರು–2 ಡಿ–ದರ್ಜೆ ನೌಕರರು –5 ಒಟ್ಟು 24 | ಆಯ್ದ ಜಿಲ್ಲೆಗಳಲ್ಲಿ ಹೆಚ್.ಎಸ್.ಪಿ.ಪಿ.ಆರ್ ಲಸಿಕೆ ಮತ್ತು ಕಾಲು ಬಾಯಿ ಜ್ವರದ ಲಸಿಕೆ ಕಾರ್ಯಕ್ರಮಗಳು ಜಾನುವಾರು ರೋಗಗಳ ಕಣ್ಗಾವಲು ಕಾರ್ಯಕ್ರಮ ರಾಷ್ಟ್ರೀಯ ಪ್ರಾಧಾನ್ಯತೆಯುಳ್ಳ ಜಾನುವಾರು ರೋಗಗಳಾದ ಟಿ.ಬಿ. ಬ್ರುಸೋಲೋಸಿಸ್, ಪುಲ್ಲೋರಂ ಮತ್ತು ರೇಬಿಸ್ ನಿಯಂತ್ರಣ ಮೇಲ್ವಿಚಾರಣೆ ಮತ್ತು ಅನುಷ್ಠಾನ ಹಾಗೂ ಕುಕ್ಕುಟ ರೋಗ ನಿರ್ಣಯ ಪ್ರಯೋಗ ಶಾಲೆಯ ಕಾರ್ಯ ಚಟುವಟಿಕೆಗಳಿಗಾಗಿ ಹಾಗೂ ಇನ್ನಿತರೆ ಕಾರ್ಯಕ್ರಮಗಳಿಗಾಗಿ ವೇತನ ಮತ್ತು ಇತರೆ ಭತ್ಯೆಗಳು, ಕಛೇರಿ ನಿರ್ವಹಣೆ, ವಾಹನ ನಿರ್ವಹಣೆ, ವಾಹನ ನಿರ್ವಹಣೆ ಇತ್ಯಾದಿಗಳಿಗಾಗಿ, |
| | 002–ವೇತನ ಅಧಿಕಾರಿಗಳು | | | 22.28 | | | 20.56 | | |
| | 003–ವೇತನ ಸಿಬ್ಬಂದಿ– | | | 10.74 | | | 13.82 | | |
| | 011–ತುಟ್ಟಿ ಭತ್ಯೆ | | | 12.55 | | | 17.19 | | |
| | 014–ಇತರೆ ಭತ್ಯೆ | | | 5.89 | | | 8.16 | | |
| | 041–ಪ್ರಯಾಣ ವೆಚ್ಚ | | | 3.50 | | | 3.00 | | |
| | 051–ಸಾಮಾನ್ಯ ವೆಚ್ಚ | | | 733.38 | | | 851.19 | | |
| | 020–ವೈದ್ಯಕೀಯ ಭತ್ಯೆ | | | 0.06 | | | 0.08 | | |
| | 101–ಸಹಾಯಾನುದಾನ | | | 8.00 | | | 8.00 | | |
| | 195–ಸಾರಿಗೆ ವೆಚ್ಚಗಳು | | | 3.00 | | | 2.00 | | |
| | 021–ವೈದ್ಯಕೀಯ ವೆಚ್ಚದ ಮರು ಪಾವತಿ | | | – | | | 1.00 | | |
| | 071–ಕಟ್ಟಡ ವೆಚ್ಚಗಳು | | | 0.60 | | | 1.00 | | |
| | **ಕೇಂದ್ರ ಪುರಸ್ಕೃತ ಯೋಜನೆಗಳು ಕೇಂದ್ರ 80: ರಾಜ್ಯ 20%** | | | | | | | | |
| 8 | 2403–00–103–0–17 17–ಕುಕ್ಕುಟ ಕ್ಷೇತ್ರಗಳಿಗೆ ಸಹಾಯ 80:20 051–ಸಾಮಾನ್ಯ ವೆಚ್ಚ | 100.00 | 25.00 | 125.00 | 120.00 | 30.00 | 150.00 | 2007–08ನೇ ವರ್ಷದಲ್ಲಿ ರಾಜ್ಯ ಕುಕ್ಕುಟ ಕೇಂದ್ರ, ಹೆಸರ ಘಟ್ಟ ಪ್ರಾದೇಶಿಕ ಕೋಳಿ ಸಾಕಾಣಿಕಾ ಕೇಂದ್ರ, ಗಂಗಾವತಿ ಮತ್ತು 2008–09ನೇ ಸಾಲಿನಲ್ಲಿ ಮಂಜೂರಾದ ಗುಂಡ್ಲುಪೇಟೆ ಕೋಳಿ ಸಾಕಾಣಿಕೆ ಕೇಂದ್ರ ಅಭಿವೃದ್ಧಿ ಹಾಗೂ ಬಲವರ್ಧನೆಗೊಳಿಸಲು ಕೇಂದ್ರದ ಪಾಲು ಶೇ. 80 ಹಾಗೂ ರಾಜ್ಯದ ಪಾಲು ಶೇ. 20 ನೆರವಿ | |

| | | | | | | | | | |
|---|---|---|---|---|---|---|---|---|---|
| | | | | | | | | ನೊಂದಿಗೆ ಅನುಷ್ಠಾನ ಗೊಳಿಸಲಾಗುತ್ತಿದೆ. ಹೆಸರಘಟ್ಟ ಮತ್ತು ಗಂಗಾವತಿ ಕುಕ್ಕುಟ ಕ್ಷೇತ್ರಗಳಿಗೆ ಸಂಬಂಧಿಸಿ ದಂತೆ 2007–08ನೇ ಸಾಲಿನಲ್ಲಿ ಬಾಕಿ ಉಳಿದಿರುವ ಕಾರ್ಯ ಕ್ರಮಗಳನ್ನು 2008–09ನೇ ಸಾಲಿನಲ್ಲಿ ಗುಂಡ್ಲುಪೇಟೆ ಕೋಳಿ ಸಾಕಾಣಿಕೆ ಕೇಂದ್ರದ ಬಾಕಿ ಉಳಿದಿರುವ ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿ ಸಲು ಹಾಗೂ ಜಿಲ್ಲಾ ಮಟ್ಟ ದಲ್ಲಿನ ಕುಕ್ಕುಟ ಕ್ಷೇತ್ರಗಳಾದ ಕೋಲಾರ ಕೂಡಿಗೆ, ಅಭಿವೃದ್ಧಿ ಪಡಿಸಲು ಯೋಜಿಸಿದ್ದು ಕಾರ್ಯಕ್ರಮ ಮುಂದುವರೆಸಲು ಕೋರಿದೆ. | |
| | ಒಟ್ಟು : | 1521.27 | 180.74 | 1702.00 | 1231.00 | 407.00 | 1643.00 | | |

**ಬಿ.ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

**ಅನುಬಂಧ–II**

2008–09ನೇ ಸಾಲಿನಲ್ಲಿ ರಾಜ್ಯವಲಯ ಯೋಜನೆಗಳಡಿ ಮುಂದುವರೆಸಲಾದ ಹುದ್ದೆಗಳ ವಿವರಗಳು.

| ಕ್ರಮ ಸಂಖ್ಯೆ | ಮುಂದುವರೆಸಲಾದ ಯೋಜನೆ ಮತ್ತು ಲೆಕ್ಕ ಶೀರ್ಷಿಕೆ | | ಯೋಜನೆಗಳಡಿ ಇರುವ ಹುದ್ದೆಗಳ ವಿವರಗಳು | |
|---|---|---|---|---|
| 1) | 2403–00–101–0–04 04–ದೊಡ್ಡರೋಗ ನಿವಾರಣೆಗಾಗಿ ಕಾವಲು ಮತ್ತು ಅದರ ಸಂಪೂರ್ಣ ನಿರ್ಮೂಲನೆಗಾಗಿ ಚುಚ್ಚುಮದ್ದು ಹಾಕುವ ಕಾರ್ಯಕ್ರಮ | 1 | ಸಹಾಯಕ ನಿರ್ದೇಶಕರು | 1 |
| | | 2 | ವಾಹನ ಚಾಲಕರು | 6 |
| | | | **ಒಟ್ಟು :** | **7** |
| 2) | 2403–00–101–0–21 21 – ಜಾನುವಾರು ರೋಗಗಳ ನಿಯಂತ್ರಣ (ಆಸ್ಕಾಡ್) | 1. | ಉಪ ನಿರ್ದೇಶಕರು | 3 |
| | | 2. | ಸಹಾಯಕ ನಿರ್ದೇಶಕರು | 4 |
| | | 3. | ಪಶುವೈದ್ಯಾಧಿಕಾರಿಗಳು | 2 |
| | | 4. | ಪಶುವೈದ್ಯಕೀಯ ಪರೀಕ್ಷಕರು | 2 |
| | | 5. | ಅಧೀಕ್ಷಕರು | 1 |
| | | 6. | ಪ್ರಥಮ ದರ್ಜೆ ಸಹಾಯಕರು | 2 |
| | | 7 | ದ್ವಿತೀಯ ದರ್ಜೆ ಸಹಾಯಕರು | 1 |
| | | 8. | ವಾಹನ ಚಾಲಕರು | 2 |

| | | | | |
|---|---|---|---|---|
| | | 9. | ಶೀಘ್ರಲಿಪಿಗಾರರು | 1 |
| | | 10. | ಬೆರಳಚ್ಚುಗಾರರು | 1 |
| | | 11. | ಡಿ–ದರ್ಜೆ ನೌಕರರು | 5 |
| | | | **ಒಟ್ಟು :** | **24** |
| 3) | 2403–00–113–0–02 02–ಮಾದರಿ ಸಮೀಕ್ಷಾ ಯೋಜನೆ– ಹಾಲು, ಮೊಟ್ಟೆ ಮತ್ತು ಉಣ್ಣೆ | 1. | ಆಡಳಿತ ಸಹಾಯಕರು | 1 |
| | | 2. | ಸಹಾಯಕ ಸಾಂಖ್ಯಿಕ ಅಧಿಕಾರಿಗಳು | 6 |
| | | 3. | ಪಶುವೈದ್ಯ ಸಹಾಯಕರು | 44 |
| | | 4. | ಸಾಂಖ್ಯಿಕ ನಿರೀಕ್ಷಕರು | 4 |
| | | 5. | ಪ್ರಥಮ ದರ್ಜೆ ಸಹಾಯಕರು | 4 |
| | | 6. | ಶೀಘ್ರಲಿಪಿಗಾರರು | 1 |
| | | 7. | ಬೆರಳಚ್ಚುಗಾರರು | 4 |
| | | 8. | ವಾಹನ ಚಾಲಕರು | 1 |
| | | 9. | ಡಿ–ದರ್ಜೆ ನೌಕರರು | 4 |
| | | | **ಒಟ್ಟು :** | **69** |
| | | | **ಒಟ್ಟು ಹುದ್ದೆಗಳು** | **100** |

**ಸಂಕ್ಷಿಪ್ತ ವಿವರಗಳು**

2010–11ನೇ ಸಾಲಿನ ಯೋಜನೆಗಳು (ರಾಜ್ಯ ವಲಯ)

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಯೋಜನೆಗಳು | ರಾಜ್ಯ | ಕೇಂದ್ರ | ಒಟ್ಟು ಸಂಖ್ಯೆ | ಒಟ್ಟು ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| 1) | ಮುಂದುವರೆದ ಯೋಜನೆಗಳು | | | | |
| | ಅ) 2403 – ಪಶುಸಂಗೋಪನೆ | 18 | 7 | 25 | 13466.00 |
| | ಆ) 2404 – ಡೈರಿ ಅಭಿವೃದ್ಧಿ | 5 | 1 | 06 | 25495.00 |
| | ಇ) 4403 – ಪಸುಸಂಗೋಪನೆ ಬಂಡವಾಳ ವೆಚ್ಚ | 03 | 0 | 03 | 3300.00 |
| | ಒಟ್ಟು ಮೊತ್ತ (ಅ+ಆ+ಇ) | 26 | 8 | 34 | 42261.00 |
| 2) | ಹೊಸ ಯೋಜನೆಗಳು | | | | |
| | ಅ) 2403 – ಪಶುಸಂಗೋಪನೆ | 3 | 1 | 4 | 510.00 |
| | ಆ) 2404 ಡೈರಿ ಅಭಿವೃದ್ಧಿ (ಕೇಂದ್ರ ಯೋಜನೆಗಳು) | – | – | – | – |
| | ಇ) 4403 – ಪಶುಸಂಗೋಪನೆ ಬಂಡವಾಳ ವೆಚ್ಚ | 2 | – | 2 | 1000.00 |
| | ಒಟ್ಟು (ಅ+ಆ+ಇ) | 5 | 1 | 6 | 1510.00 |
| | ಒಟ್ಟು ಮೊತ್ತ (1+2) | 31 | 9 | 40 | 43771.00 |

**ಬಿ.ಕೆ. ಶ್ರೀನಿವಾಸಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

## ಅನುಬಂಧ-III

### ದಿನಾಂಕ : 1-4-2006 ರಿಂದ ರಾಜ್ಯವಲಯದಿಂದ ಜಿಲ್ಲಾವಲಯಕ್ಕೆ ಆಸ್ಕಾಡ್ ಯೋಜನೆಯಡಿ ಲೆಕ್ಕ ಶೀರ್ಷಿಕೆ 2403-00-101-0-21 (ಯೋಜನೆ) ವರ್ಗಾವಣೆಗೊಂಡು ಮುಂದುವರಿಸಲಾದ ಹುದ್ದೆಗಳು

| ಕ್ರಮ ಸಂಖ್ಯೆ | ಯೋಜನೆಗಳು | ಪ್ರಸ್ತುತ ರಾಜ್ಯವಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಹುದ್ದೆಗಳ (ಪದನಾಮ) | ಹುದ್ದೆಗಳ ಸಂಖ್ಯೆ | ಜಿಲ್ಲಾ ವಲಯಕ್ಕೆ ವರ್ಗಾಹಿಸಲಾದ ಹುದ್ದೆಗಳು ಸಂಖ್ಯೆ | 1-4-2006ರಿಂದ ಜಿಲ್ಲಾವಲಯಕ್ಕೆ ನಿಯಂತ್ರಣಕ್ಕೊಳಪಡಿಸಿದ ಜಿಲ್ಲೆಗಳ ವಿವರ |
|---|---|---|---|---|---|
| 1 | 2 | 3 | 4 | 5 | 6 |
| 1 | ನಾಯಿಹುಚ್ಚು ತಡೆಗಟ್ಟು ಯೋಜನೆ, ಬೆಂಗಳೂರು | 1 ಪಶುವೈದ್ಯಾಧಿಕಾರಿ | 1 | 1 | ಬೆಂಗಳೂರು ನಗರ ಜಿಲ್ಲೆ |
| | | 2 ಪಶುವೈದ್ಯಕೀಯ ಮೇಲ್ವಿಚಾರಕರು | 1 | 1 | ಬೆಂಗಳೂರು ನಗರ ಜಿಲ್ಲೆ |
| | | 3 ಹಿರಿಯ ವಾಹನ ಚಾಲಕರು | 1 | 1 | ಬೆಂಗಳೂರು ನಗರ ಜಿಲ್ಲೆ |
| 2 | ಕ್ಷಯ ಮತ್ತು ಕಂದು ರೋಗ ನಿಯಂತ್ರಣ, ಬೆಂಗಳೂರು | 1 ಪಶುವೈದ್ಯಾಧಿಕಾರಿ | 1 | 1 | ಬೆಂಗಳೂರು ನಗರ ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಬೆಂಗಳೂರು ನಗರ ಜಿಲ್ಲೆ |
| | | 3 ವಾಹನ ಚಾಲಕರು | 1 | 1 | ಬೆಂಗಳೂರು ನಗರ ಜಿಲ್ಲೆ |
| | | 4 ಡಿ-ದರ್ಜೆ ನೌಕರರು | 1 | 1 | ಬೆಂಗಳೂರು ನಗರ ಜಿಲ್ಲೆ |
| 3 | ಪುಲ್ಲೋರಂ ನಿಯಂತ್ರಣ, ಘಟಕ, ಬೆಂಗಳೂರು-1 | 1 ಪಶುವೈದ್ಯಾಧಿಕಾರಿ | 1 | 1 | ಬೆಂಗಳೂರು ನಗರ ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಬೆಂಗಳೂರು ನಗರ ಜಿಲ್ಲೆ |
| | | 3 ಡಿ-ದರ್ಜೆ ನೌಕರರು | 1 | 1 | ಬೆಂಗಳೂರು ನಗರ ಜಿಲ್ಲೆ |
| 4 | ಪುಲ್ಲೋರಂ ನಿಯಂತ್ರಣ, ಘಟಕ, ಬೆಂಗಳೂರು-2 | 1 ಪಶುವೈದ್ಯಾಧಿಕಾರಿ | 1 | 1 | ಬೆಂಗಳೂರು ನಗರ ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಬೆಂಗಳೂರು ನಗರ ಜಿಲ್ಲೆ |
| | | 3 ಡಿ-ದರ್ಜೆ ನೌಕರರು | 1 | 1 | ಬೆಂಗಳೂರು ನಗರ ಜಿಲ್ಲೆ |
| 5 | ನಾಯಿ ಹುಚ್ಚು ತಡೆಗಟ್ಟು ಯೋಜನೆ, ಮೈಸೂರು | 1 ಪಶುವೈದ್ಯಾಧಿಕಾರಿ | 1 | 1 | ಮೈಸೂರು ಜಿಲ್ಲೆ |
| | | 2 ಪಶುವೈದ್ಯಕೀಯ ಮೇಲ್ವಿಚಾರಕರು | 1 | 1 | ಮೈಸೂರು ಜಿಲ್ಲೆ |
| | | 3 ಹಿರಿಯ ವಾಹನ ಚಾಲಕರು | 1 | 1 | ಮೈಸೂರು ಜಿಲ್ಲೆ |
| 6 | ಕ್ಷಯ ಮತ್ತು ಕಂದು ರೋಗ ನಿಯಂತ್ರಣ, ಮೈಸೂರು | 1 ಪಶುವೈದ್ಯಾಧಿಕಾರಿ | 1 | 1 | ಮೈಸೂರು ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಮೈಸೂರು ಜಿಲ್ಲೆ |
| | | 3 ಡಿ-ದರ್ಜೆ ನೌಕರರು | 1 | 1 | ಮೈಸೂರು ಜಿಲ್ಲೆ |
| 7 | ಪುಲ್ಲೋರಂ ನಿಯಂತ್ರಣ, ಘಟಕ, ಮೈಸೂರು | 1 ಪಶುವೈದ್ಯಾಧಿಕಾರಿ | 1 | 1 | ಮೈಸೂರು ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಮೈಸೂರು ಜಿಲ್ಲೆ |
| | | 3 ಡಿ-ದರ್ಜೆ ನೌಕರರು | 1 | 1 | ಮೈಸೂರು ಜಿಲ್ಲೆ |
| 8 | ನಾಯಿಹುಚ್ಚು ತಡೆಗಟ್ಟು ಯೋಜನೆ, ಮಂಗಳೂರು | 1 ಪಶುವೈದ್ಯಾಧಿಕಾರಿ | 1 | 1 | ಮಂಗಳೂರು ಜಿಲ್ಲೆ |
| | | 2 ಪಶುವೈದ್ಯಕೀಯ ಮೇಲ್ವಿಚಾರಕರು | 1 | 1 | ಮಂಗಳೂರು ಜಿಲ್ಲೆ |
| | | 3 ವಾಹನ ಚಾಲಕರು | 1 | 1 | ಮಂಗಳೂರು ಜಿಲ್ಲೆ |
| 9 | ಪುಲ್ಲೋರಂ ನಿಯಂತ್ರಣ, ಘಟಕ, ಮಂಗಳೂರು | 1 ಪಶುವೈದ್ಯಾಧಿಕಾರಿ | 1 | 1 | ಮಂಗಳೂರು ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಮಂಗಳೂರು ಜಿಲ್ಲೆ |
| | | 3 ಡಿ-ದರ್ಜೆ ನೌಕರರು | 1 | 1 | ಮಂಗಳೂರು ಜಿಲ್ಲೆ |
| 10 | ನಾಯಿ ಹುಚ್ಚು ತಡೆಗಟ್ಟು ಯೋಜನೆ, ಧಾರವಾಡ | 1 ಪಶುವೈದ್ಯಾಧಿಕಾರಿ | 1 | 1 | ಧಾರವಾಡ ಜಿಲ್ಲೆ |
| | | 2 ಪಶುವೈದ್ಯಕೀಯ ಮೇಲ್ವಿಚಾರಕರು | 1 | 1 | ಧಾರವಾಡ ಜಿಲ್ಲೆ |
| | | 3 ವಾಹನ ಚಾಲಕರು | 1 | 1 | ಧಾರವಾಡ ಜಿಲ್ಲೆ |
| 11 | ಕ್ಷಯ ಮತ್ತು ಕಂದು ರೋಗ ನಿಯಂತ್ರಣ, ಧಾರವಾಡ | 1 ಪಶುವೈದ್ಯಾಧಿಕಾರಿ | 1 | 1 | ಧಾರವಾಡ ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಧಾರವಾಡ ಜಿಲ್ಲೆ |
| | | 3 ವಾಹನ ಚಾಲಕರು | 1 | 1 | ಧಾರವಾಡ ಜಿಲ್ಲೆ |
| | | 4 ಡಿ-ದರ್ಜೆ ನೌಕರರು | 1 | 1 | ಧಾರವಾಡ ಜಿಲ್ಲೆ |

| | | | | | |
|---|---|---|---|---|---|
| 12 | ನಾಯಿ ಹುಚ್ಚು ತಡೆಗಟ್ಟು ಯೋಜನೆ, ಬೆಳಗಾಂ | 1 ಪಶುವೈದ್ಯಾಧಿಕಾರಿ | 1 | 1 | ಬೆಳಗಾಂ ಜಿಲ್ಲೆ |
| | | 2 ಪಶುವೈದ್ಯಕೀಯ ಮೇಲ್ವಿಚಾರಕರು | 1 | 1 | ಬೆಳಗಾಂ ಜಿಲ್ಲೆ |
| | | 3 ವಾಹನ ಚಾಲಕರು | 1 | 1 | ಬೆಳಗಾಂ ಜಿಲ್ಲೆ |
| 13 | ಕ್ಷಯ ಮತ್ತು ಕಂದು ರೋಗ ನಿಯಂತ್ರಣ ಬೆಳಗಾಂ | 1 ಪಶುವೈದ್ಯಾಧಿಕಾರಿ | 1 | 1 | ಬೆಳಗಾಂ ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಬೆಳಗಾಂ ಜಿಲ್ಲೆ |
| | | 3 ಡಿ-ದರ್ಜೆ ನೌಕರರು | 1 | | ಬೆಳಗಾಂ ಜಿಲ್ಲೆ |
| 14 | ಪುಲ್ಲೋರಂ ನಿಯಂತ್ರಣ, ಘಟಕ, ಬೆಳಗಾಂ | 1 ಪಶುವೈದ್ಯಾಧಿಕಾರಿ | 1 | 1 | ಬೆಳಗಾಂ ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಬೆಳಗಾಂ ಜಿಲ್ಲೆ |
| 15 | ನಾಯಿಹುಚ್ಚು ತಡೆಗಟ್ಟು ಯೋಜನೆ, ಗುಲ್ಬರ್ಗಾ | 1 ಪಶುವೈದ್ಯಾಧಿಕಾರಿ | 1 | 1 | ಗುಲ್ಬರ್ಗಾ ಜಿಲ್ಲೆ |
| | | 2 ಪಶುವೈದ್ಯಕೀಯ ಮೇಲ್ವಿಚಾರಕರು | 1 | 1 | ಗುಲ್ಬರ್ಗಾ ಜಿಲ್ಲೆ |
| | | 3 ವಾಹನ ಚಾಲಕರು | 1 | 1 | ಗುಲ್ಬರ್ಗಾ ಜಿಲ್ಲೆ |
| 16 | ಪುಲ್ಲೋರಂ ನಿಯಂತ್ರಣ, ಘಟಕ, ಗುಲ್ಬರ್ಗಾ | 1 ಪಶುವೈದ್ಯಾಧಿಕಾರಿ | 1 | 1 | ಗುಲ್ಬರ್ಗಾ ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಗುಲ್ಬರ್ಗಾ ಜಿಲ್ಲೆ |
| 17 | ಪುಲ್ಲೋರಂ ನಿಯಂತ್ರಣ, ಘಟಕ, ಕೋಲಾರ | 1 ಪಶುವೈದ್ಯಾಧಿಕಾರಿ | 1 | 1 | ಕೋಲಾರ ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಕೋಲಾರ ಜಿಲ್ಲೆ |
| 18 | ಪುಲ್ಲೋರಂ ನಿಯಂತ್ರಣ ಘಟಕ ರಾಯಚೂರು | 1 ಪಶುವೈದ್ಯಾಧಿಕಾರಿ | 1 | 1 | ರಾಯಚೂರು ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ರಾಯಚೂರು ಜಿಲ್ಲೆ |
| 19 | ಪುಲ್ಲೋರಂ ನಿಯಂತ್ರಣ, ಘಟಕ, ಹಾಸನ | 1 ಪಶುವೈದ್ಯಾಧಿಕಾರಿ | 1 | 1 | ಹಾಸನ ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಹಾಸನ ಜಿಲ್ಲೆ |
| 20 | ಪುಲ್ಲೋರಂ ನಿಯಂತ್ರಣ, ಘಟಕ, ಬಳ್ಳಾರಿ | 1 ಪಶುವೈದ್ಯಾಧಿಕಾರಿ | 1 | 1 | ಬಳ್ಳಾರಿ ಜಿಲ್ಲೆ |
| | | 2 ಪಶುವೈದ್ಯಕೀಯ ಪರೀಕ್ಷಕರು | 2 | 2 | ಬಳ್ಳಾರಿ ಜಿಲ್ಲೆ |
| | | 3 ಡಿ-ದರ್ಜೆ ನೌಕರರು | 1 | 1 | ಬಳ್ಳಾರಿ ಜಿಲ್ಲೆ |
| | | **ಒಟ್ಟು ಹುದ್ದೆಗಳು** | **71** | **71** | |

**ಬಿ.ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

## ಅನುಬಂಧ-IV

## ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ

2010-2011ನೇ ಸಾಲಿನ ಹೊಸ ಯೋಜನೆಗಳು ಹಾಗೂ ಅನುದಾನದ ವಿವರಗಳು

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಯೋಜನೆ | ಅನುದಾನ | ಯೋಜನಾ ವಿವರ |
|---|---|---|---|
| 1 | 2 | 3 | 4 |
| | 2403-ಪಶುಸಂಗೋಪನೆ (ರಾಜ್ಯವಲಯ) (ರಾಜ್ಯ) | | |
| 1) | 2403-00-800-0-36 ಜಾನುವಾರು ವಿಮಾ ಯೋಜನೆ | 5.00 | ಜಾನುವಾರುಗಳ ವಿಮೆಯನ್ನು ಕೇಂದ್ರ ಸರ್ಕಾರ ಯೋಜನೆಯ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳನ್ನು ಹೊರತುಪಡಿಸಿ ಉಳಿದ ಜಿಲ್ಲೆಗಳಲ್ಲಿ ಶೇ. 50 ರಷ್ಟು ಪ್ರೀಮಿಯಂ ಸಹಾಯಧನ ಮತ್ತು ಶೇ. 50 ಫಲಾನುಭವಿ ಭರಿಸಲು ಯೋಜಿಸಿದೆ. ಸದರಿ ಯೋಜನೆಯನ್ನು ಇಲಾಖೆಯ ಜಿಲ್ಲಾ ಉಪ ನಿರ್ದೇಶಕರುಗಳ ಮೂಲಕ ಅನುಷ್ಠಾನಗೊಳಿಸಲಾಗುವುದು. |

| | | | |
|---|---|---|---|
| 2) | 2403–00–800–0–37 ಅಮೃತ್ ಮಹಲ್ ಕಾವಲ್ ಯೋಜನೆ | 500.00 | ಚಿಕ್ಕಮಗಳೂರು, ಚಿತ್ರದುರ್ಗ, ತುಮಕೂರು ಮತ್ತು ಹಾಸನ ಮುಂತಾದ ಜಿಲ್ಲೆಗಳಲ್ಲಿ ಅಮೃತ್ ಮಹಲ್ ಕಾವಲಿನಲ್ಲಿ ಪಶು ಸಂಗೋಪನೆ ಹಾಗೂ ತಳಿ ಅಭಿವೃದ್ಧಿಗೊಳಿಸಲು ಯೋಜಿಸಲಾಗುವುದು. |
| 3) | 2403–00–101–0–28 ಕಾಲು ಬಾಯಿಜ್ವರ ರೋಗ ನಿಯಂತ್ರಣ | 5.00 | ಅಧಿಕ ಹಾಲು ಉತ್ಪಾದಿತ ಜಿಲ್ಲೆಗಳಾದ ಬೆಂಗಳೂರು ಗ್ರಾಮಾಂತರ, ಬೆಂಗಳೂರು (ನ), ರಾಮನಗರ, ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಕಾಲುಬಾಯಿ ಜ್ವರ ರೋಗ ರಹಿತ ವಲಯ ನಿರ್ಮಾಣಕ್ಕಾಗಿ ಯೋಜಿಸಿದೆ. ಇಲಾಖೆಯ ಜಿಲ್ಲಾ ಉಪ ನಿರ್ದೇಶಕರ ಮೂಲಕ ಅನುಷ್ಠಾನಗೊಳಿಸಲಾಗುವುದು. |
| 4) | 2403–00–101–0–29 ನೂತನ ಸಂಚಾರಿ ಚಿಕಿತ್ಸಾ ಘಟಕ ಪ್ರಾರಂಭ | ಪೂರಕ ಅನುದಾನ ಒದಗಿಸಬೇಕಿದೆ. | ಗ್ರಾಮಾಂತರ ಪ್ರದೇಶದಲ್ಲಿ ಪಶುವೈದ್ಯಕೀಯ ಸೌಲಭ್ಯಗಳನ್ನು ವಿಸ್ತರಿಸಲು 50 ನೂತನ ಸಂಚಾರಿ ಪಶುವೈದ್ಯಕೀಯ ಘಟಕಗಳನ್ನು ಸ್ಥಾಪಿಸಲು ಯೋಜಿಸಿದೆ. |
| | 2404– ಡೈರಿ ಅಭಿವೃದ್ಧಿ | | |
| | 4403–ಬಂಡವಾಳ ವೆಚ್ಚ | | |
| 5) | 4403–00–101–0–001 ಶಿಕ್ಷಣ, ವಿಸ್ತರಣೆ ಮತ್ತು ಸಂಶೋಧನೆ ಕೆ.ವಿ.ಎ.ಎಫ್.ಎಸ್.ಯು ಬೀದರ್ | 500.00 | ಪಶುವೈದ್ಯಕೀಯ ವಿಶ್ವವಿದ್ಯಾಲಯ ಮೂಲಕ ಸಂಶೋಧನೆ ಹಾಗು ಶಿಕ್ಷಣ ಸಂಸ್ಥೆಗಳ ಕಾಮಗಾರಿಗಳನ್ನು ವಿಶೇಷ ಅಭಿವೃದ್ಧಿಯ ಯೋಜನೆಯಡಿ ಕೈಗೊಳ್ಳಲು ಯೋಜಿಸಲಾಗುವುದು. |
| | 133–ವಿಶೇಷ ಅಭಿವೃದ್ಧಿ | 425.00 | |
| | ಯೋಜನೆ 139–ಪ್ರಧಾನ ಕಾಮಗಾರಿಗಳು | 75.00 | |
| 6) | 4403–00–101–0–12 ಪಶುವೈದ್ಯಕೀಯ ಮಹಾ ವಿಶ್ವವಿದ್ಯಾಲಯ, ಅಥಣಿ 386–ನಿರ್ಮಾಣ | 500.00 | ಬೆಳಗಾಂ ಜಿಲ್ಲೆ, ಅಥಣಿಯಲ್ಲಿ ಹೊಸ ಪಶುವೈದ್ಯಕೀಯ ಮಹಾ ವಿದ್ಯಾಲಯವನ್ನು ಸ್ಥಾಪಿಸಲು ಮೂಲಭೂತ ಸೌಕರ್ಯ ಒದಗಿಸಲು ಯೋಜಿಸಿದೆ. |

**ಬಿ.ಕೆ. ಶ್ರೀನಿವಾಸಮೂರ್ತಿ**

ಪಿ.ಆರ್. 1053

ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ:** ಮುಳಬಾಗಿಲು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಹಿಂದಿನ ಅಧ್ಯಕ್ಷರಾಗಿದ್ದ ಹಾಗೂ ಹಾಲಿ ಸದಸ್ಯರಾಗಿರುವ ಶ್ರೀ ಕುರುಡುಮಲೆ ಮಂಜುನಾಥ್ ಇವರ ವಿರುದ್ಧ ಕಾಯ್ದೆಯ ಕಲಂ 129 ರಡಿಯಲ್ಲಿ ಕ್ರಮ ಕೈಗೊಳ್ಳುವ ಕುರಿತು.

**ಓದಲಾಗಿದೆ :**

1. ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೃಮಾಇ/124/ಚುನಾವಣೆ/2008 ದಿನಾಂಕ: 26/11/2008.
2. ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೃಮಾಇ/124/ಚುನಾವಣೆ/2008 ದಿನಾಂಕ: 05/01/2009.
3. ಶ್ರೀ ಕುರುಡುಮಲೆ ಮಂಜುನಾಥ್ ಇವರ ಲಿಖಿತ ಹೇಳಿಕೆ ದಿನಾಂಕ: 23/11/2009.
4. ಸರ್ಕಾರದ ತಿಳುವಳಿಕೆ ನೋಟೀಸು ಸಂಖ್ಯೆ: ಸಇ 320 ಎಂಆರ್ಇ 2008 ದಿನಾಂಕ: 26/10/2009.
5. ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೃಮಾಇ/124/ಚುನಾವಣೆ/2008 ದಿನಾಂಕ: 08/01/2010.
6. ಸರ್ಕಾರದ ತಿಳುವಳಿಕೆ ನೋಟೀಸು ಸಂಖ್ಯೆ: ಸಇ 320 ಎಂಆರ್ಇ 2008 ದಿನಾಂಕ: 25/02/2010 ಮತ್ತು ದಿನಾಂಕ: 24/03/2010.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಪತ್ರದಲ್ಲಿ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಮುಳಬಾಗಿಲು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಆಡಳಿತ ಕಛೇರಿಯಲ್ಲಿ ಸಮಿತಿ ಸಿಬ್ಬಂದಿಯಾದ ಶ್ರೀ ಜಿ. ಕೃಷ್ಣಮೂರ್ತಿ ಇವರು ಕಾರ್ಯ ನಿರ್ವಹಿಸುತ್ತಿದ್ದಾಗ, ಸದರಿಯವರನ್ನು ಸಮಿತಿಯ ಅಧ್ಯಕ್ಷರಾದ ಶ್ರೀ ಕುರುಡುಮಲೆ ಮಂಜುನಾಥ ಇವರು ತಮ್ಮ ಕೊಠಡಿಗೆ ಕರೆದು ಅವಾಚ್ಯ ಶಬ್ದಗಳನ್ನು ಬಳಸಿ, ಹಲ್ಲೆ ಮಾಡಿರುತ್ತಾರೆಂದು ಸದರಿ ಸಿಬ್ಬಂದಿಯು ಲಿಖಿತ ಮೂಲಕ ಸಮಿತಿಯ ಕಾರ್ಯದರ್ಶಿಯವರಿಗೆ ಪತ್ರ ನೀಡಿರುತ್ತಾರೆ. ಹಾಗೂ ಕರ್ನಾಟಕ ರಾಜ್ಯ ಕೃಷಿ ಮಾರಾಟ ಇಲಾಖಾ ಸಿಬ್ಬಂದಿ ಸಂಘ, ಬೆಂಗಳೂರು ಇವರು ಸಮಿತಿಯಲ್ಲಿ ಸಿಬ್ಬಂದಿ ಮೇಲೆ ಅಧ್ಯಕ್ಷರಿಂದ ನಡೆದ ಹಲ್ಲೆ ಬಗ್ಗೆ ಪ್ರಸ್ತಾಪಿಸಿ,

ಈ ಕುರಿತು ಸಿಬ್ಬಂದಿಗಳು ಕಛೇರಿಯಲ್ಲಿ ಕೆಲಸ ನಿರ್ವಹಿಸಲು ಸೂಕ್ತ ರಕ್ಷಣೆ ಒದಗಿಸಲು ಮತ್ತು **ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರ ಕಲಂ 129 ರಡಿ** ಅಧ್ಯಕ್ಷರ ವಿರುದ್ಧ ಕ್ರಮ ಕೈಗೊಳ್ಳಲು ನಿರ್ದೇಶಕರನ್ನು ಕೋರಿರುವುದಾಗಿ ತಿಳಿಸಿರುತ್ತಾರೆ. ನಿರ್ದೇಶಕರು ಸಮಿತಿಯ ಅಧ್ಯಕ್ಷರಿಗೆ ನೋಟೀಸು ಜಾರಿಗೊಳಿಸಿ, ಲಿಖಿತ ಹೇಳಿಕೆ ನೀಡಲು ತಿಳಿಸಿದಾಗ್ಯೂ ಸದರಿಯವರು ಯಾವುದೇ ಪ್ರತಿಕ್ರಿಯೆ ವ್ಯಕ್ತ ಪಡಿಸಿರುವುದಿಲ್ಲವೆಂದು ತಿಳಿಸಿ, ಪ್ರಕರಣದ ಗಂಭೀರತೆಯನ್ನು ಗಮನದಲ್ಲಿಟ್ಟು ಕಾಯ್ದೆ 129(1)ರಡಿ ಸೂಕ್ತ ಕ್ರಮ ಕೈಗೊಳ್ಳಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (2) ರ ಪತ್ರದಲ್ಲಿ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರು ಪ್ರಕರಣಕ್ಕೆ ಸಂಬಂಧಿಸಿದ ನೋಟೀಸಿಗೆ ಶ್ರೀ ಮಂಜುನಾಥ್ ರವರು ದಿನಾಂಕ: 16/12/2008 ರಂದು ಲಿಖಿತ ಹೇಳಿಕೆ ನೀಡಿರುತ್ತಾರೆ ಎಂದು ತಿಳಿಸಿ, ಪ್ರಕರಣ ನಡೆದ ಸಂದರ್ಭದಲ್ಲಿ ಶ್ರೀ ಮಂಜುನಾಥ್ ಇವರು ಸಮಿತಿಯ ಅಧ್ಯಕ್ಷರಾಗಿದ್ದು, ಸದರಿಯವರ ವಿರುದ್ಧ ಸಮಿತಿಯ ಸದಸ್ಯರು ಮಂಡಿಸಿದ್ದ ಅವಿಶ್ವಾಸ ಗೊತ್ತುವಳಿಯು ದಿನಾಂಕ: 19/12/2008 ರಂದು ನಡೆದ ಸಭೆಯಲ್ಲಿ ಅಂಗೀಕೃತಗೊಂಡ ಕಾರಣ, ಸದರಿಯವರು ಪ್ರಸ್ತುತ ಸದಸ್ಯರಾಗಿ ಮುಂದುವರೆದಿರುತ್ತಾರೆ. ಸದರಿಯವರು ಅಧ್ಯಕ್ಷರಾಗಿಲ್ಲದೇ, ಸದಸ್ಯರಾಗಿ ಮುಂದುವರೆದಿರುವ ಕಾರಣ, ಕಾಯ್ದೆಯ ಕಲಂ 129(2) ರ ಮೇರೆಗೆ ಸೂಕ್ತ ಕ್ರಮ ಕೈಗೊಳ್ಳಲು ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ (3) ರ ಸರ್ಕಾರದ ತಿಳುವಳಿಕೆ ನೋಟೀಸಿಗೆ ಶ್ರೀ ಕುರುಡುಮಲೆ ಮಂಜುನಾಥ್ ರವರು ಮೇಲೆ ಓದಲಾದ (4) ರನ್ವಯ ಲಿಖಿತ ಹೇಳಿಕೆ ನೀಡಿದ್ದು, ತಮ್ಮ ಸದಸ್ಯತ್ವಕ್ಕೆ ಧಕ್ಕೆ ಬರುವಂತಹ ಕೆಲಸದಲ್ಲಿ ತಾವು ಭಾಗಿಯಾಗಿಲ್ಲವೆಂದು ಪರಿಗಣಿಸಿ, ತಮ್ಮ ಬಗ್ಗೆ ಒಳ್ಳೆಯ ತೀರ್ಮಾನಕ್ಕೆ ಬರುವಂತೆ ಕೋರಿರುತ್ತಾರೆ. ಮೇಲೆ ಓದಲಾದ (5) ರ ಪತ್ರದಲ್ಲಿ ನಿರ್ದೇಶಕರು ಶ್ರೀ ಮಂಜುನಾಥ್ ರವರ ಲಿಖಿತ ಹೇಳಿಕೆ ಸತ್ಯಕ್ಕೆ ದೂರವಾಗಿದೆ ಎಂದೂ, ಒಪ್ಪಲು ಸಾಧ್ಯವಿಲ್ಲವೆಂದೂ ತಿಳಿಸಿ, ಸದರಿಯವರ ಸದಸ್ಯತ್ವದ ಅನರ್ಹತೆ ಬಗ್ಗೆ ಕಾಯ್ದೆಯ ಕಲಂ 129(2) ರಡಿ ಸೂಕ್ತ ಕ್ರಮ ಕೈಗೊಳ್ಳುವಂತೆ ಮತ್ತೊಮ್ಮೆ ಸರ್ಕಾರವನ್ನು ಕೋರಿರುತ್ತಾರೆ.

ವಿಷಯದ ಕುರಿತು, ತಮ್ಮ ಅಹವಾಲುಗಳು ಏನಾದರೂ ಇದ್ದಲ್ಲಿ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ ಇವರ ಮುಂದೆ ವ್ಯಕ್ತ ಪಡಿಸುವಂತೆ ಮೇಲೆ ಓದಲಾದ (6) ರ ತಿಳುವಳಿಕೆ ನೋಟೀಸುಗಳಲ್ಲಿ ಎರಡು ಬಾರಿ ಅವಕಾಶ ನೀಡಿದರೂ ಸದರಿಯವರು ಸರ್ಕಾರದಲ್ಲಿ ಖುದ್ದು ಹಾಜರಾಗದೇ, ತಮ್ಮ ಅಹವಾಲುಗಳನ್ನು ವ್ಯಕ್ತಪಡಿಸಲು ವಿಫಲರಾಗಿರುತ್ತಾರೆ.

ಆದ್ದರಿಂದ, ಶ್ರೀ ಕುರುಡುಮಲೆ ಮಂಜುನಾಥ್, ಹಿಂದಿನ ಅಧ್ಯಕ್ಷರು ಹಾಗೂ ಪ್ರಸುತ ಸದಸ್ಯರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮುಳಬಾಗಿಲು ಇವರು ಸದರಿ ವಿಷಯದ ಬಗ್ಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸುವಂತದ್ದು ಯಾವುದೂ ಇರುವುದಿಲ್ಲವೆಂದು ಸರ್ಕಾರವು ನಿರ್ಧರಿಸಿ, **ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 129(2) ರನ್ವಯ** ಇವರ ಸದಸ್ಯತ್ವವನ್ನು ರದ್ದುಪಡಿಸಲು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 320 ಎಂಆರ್‌ಇ 2008, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್,2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರ ಕಲಂ 129 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕುರುಡುಮಲೆ ಮಂಜುನಾಥ್, ಹಿಂದಿನ ಅಧ್ಯಕ್ಷರು ಹಾಗೂ ಪ್ರಸ್ತುತ ಸದಸ್ಯರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮುಳಬಾಗಿಲುರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮುಳಬಾಗಿಲು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಸದಸ್ಯತ್ವದಿಂದ ತೆಗೆದು ಹಾಕಲಾಗಿದೆ.

ಪಿ.ಆರ್. 1171

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಾಸುದೇವ ಮೂರ್ತಿ ಸಿ.ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ–1
ಸಹಕಾರ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ** : ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವ ಯೋಜನೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ** :

1. ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 199 ಸಿಎಸ್‌ಎಲ್ 2004 ದಿನಾಂಕ: 7–9–2004.
2. ಸರ್ಕಾರದ ಆದೇಶ ಸಂಖ್ಯೆ ಆಇ 388 ಸಿಎಸ್‌ಎಲ್ 2005 ದಿನಾಂಕ: 30–8–2005.
3. ಸರ್ಕಾರದ ಆದೇಶ ಸಂಖ್ಯೆ ಆಇ 419 ಸಿಎಸ್‌ಎಲ್ 2006 ದಿನಾಂಕ: 7–3–2007.
4. ಸರ್ಕಾರದ ಆದೇಶ ಸಂಖ್ಯೆ ಆಇ 419 ಸಿಎಸ್‌ಎಲ್ 07 ದಿನಾಂಕ: 16–11–2007.
5. ಸರ್ಕಾರದ ಆದೇಶ ಸಂಖ್ಯೆ ಆಇ 419 ಸಿಎಸ್‌ಎಲ್ 07 ದಿನಾಂಕ: 14–08–08.
6. ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ ವಾತೆಉಆ (ಕೇ.ಕ–1) ಐಎನ್‌ಡಬ್ಲ್ಯೂ/ಆರ್‌ವಿಡಬ್ಲ್ಯೂ/ಸಿಆರ್–06/95–96 ದಿನಾಂಕ: 16–12–09

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶ ದಿನಾಂಕ 7–9–2004ರಲ್ಲಿ ಈ ಯೋಜನೆಯನ್ನು ಮುಂದುವರಿಸುತ್ತಾ ದಿನಾಂಕ: 12–12–94ರ ಆದೇಶದಲ್ಲಿ ನಮೂದಿಸಿರುವ ವಿಧಾನ ಮತ್ತು ಷರತ್ತುಗಳಿಗೊಳಪಟ್ಟ ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವುದಕ್ಕೆ ದಿನಾಂಕ 1–4–2004 ರಿಂದ 31–3–2005ರ ವರೆಗೆ ಅವಧಿ ವಿಸ್ತರಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಆದೇಶ ದಿನಾಂಕ 30-8-2005ರಲ್ಲಿ ಈ ಯೋಜನೆಯನ್ನು ದಿನಾಂಕ 1-4-2005 ರಿಂದ ದಿನಾಂಕ 31-3-2006 ರವರೆಗೆ ವಿಸ್ತರಿಸಿ ಆದೇಶ ಹೊರಡಿಸಿದೆ.

ಮೇಲೆ (3) ರಲ್ಲಿ ಓದಲಾದ ಆದೇಶ ದಿನಾಂಕ 7-3-2007 ರಲ್ಲಿ ಈ ಯೋಜನೆಯನ್ನು ದಿನಾಂಕ 1-4-2006ರಿಂದ 31-3-2007ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (4) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 6-11-07 ರಲ್ಲಿ ಯೋಜನೆಯನ್ನು ದಿನಾಂಕ 1-4-07 ರಿಂದ 31-3-08 ರವರೆವಿಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (5) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 14-08-08 ರಲ್ಲಿ ಯೋಜನೆಯನ್ನು ದಿನಾಂಕ 1-4-08 ರಿಂದ 31-3-09 ರವರೆವಿಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (6) ರಲ್ಲಿನ ಪತ್ರದಲ್ಲಿ ವಾಣಿಜ್ಯ ತೆರಿಗೆ ಆಯುಕ್ತರು ಪರಿಷ್ಕೃತ ಯೋಜನೆಯ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ವಾಣಿಜ್ಯ ತೆರಿಗೆ ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಹಾಲಿ ಇರುವ ಯೋಜನೆಯನ್ನು ಮುಂದುವರಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಆಇ 73 ಸಿಎಸ್ಎಲ್ 2009, ದಿನಾಂಕ: 21-04-2010**

ಸರ್ಕಾರಿ ಆದೇಶ ಸಂಖ್ಯೆ ಆಇ 165 ಸಿಎಸ್ಒ 94 ದಿನಾಂಕ 12-12-94 ರಲ್ಲಿ ನಮೂದಿಸಲಾದ ವಿಧಾನ ಮತ್ತು ಷರತ್ತುಗಳಿಗೊಳಪಟ್ಟಂತೆ ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವುದಕ್ಕೆ ಸಂಬಂಧಪಟ್ಟ ಯೋಜನೆಯನ್ನು ದಿನಾಂಕ 1-4-2009 ರಿಂದ 31-3-2010ರವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1172

**ಡಿ.ಆರ್ ಶಶಿಧರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ವಾ.ತೆ.1).

**ಕಂದಾಯ ಸಚಿವಾಲಯ**

**ವಿಷಯ** : ಶಿಷ್ಟಾಚಾರ ಕಾರ್ಯ ನಿರ್ವಹಣೆಗಾಗಿ ತಹಶೀಲ್ದಾರ್ (ಗ್ರೇಡ್-11) ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ** :

1. ಸರ್ಕಾರದ ಆದೇಶ ಸಂ: ಕಂಇ 28 ಎಟಿಎಸ್ 93, ದಿನಾಂಕ: 05-07-1993.
2. ಸರ್ಕಾರದ ಆದೇಶ ಸಂ: ಕಂಇ 110 ಎಎಸ್‌ಡಿ 2002 ದಿನಾಂಕ: 25-09-2004
3. ಸರ್ಕಾರದ ಆದೇಶ ಸಂ: ಕಂಇ 18 ಎಎಸ್‌ಡಿ 2008 ದಿನಾಂಕ: 06-05-2008
4. ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಅವರ ಪತ್ರ ಸಂ:ಕಂ/ಸಿಬ್ಬಂದಿ-1/121/2009-10/19824, ದಿನಾಂಕ:07-12-2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1)ರ ಆದೇಶದಲ್ಲಿ ಶಿಷ್ಟಾಚಾರ ಕಾರ್ಯ ನಿರ್ವಹಣೆಗಾಗಿ ಮೈಸೂರು, ಬೆಳಗಾಂ ಮತ್ತು ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ತಲಾ ಒಂದು ತಹಶೀಲ್ದಾರ್ ಗುಂಪು-ಬಿ ಹುದ್ದೆಯನ್ನು ಒಂದು ವರ್ಷದವರೆಗೆ ತಾತ್ಕಾಲಿಕವಾಗಿ ಸೃಜಿಸಲಾಗಿತ್ತು. ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ಅವಶ್ಯಕತೆಗನುಗುಣವಾಗಿ ಮುಂದುವರೆಸಲಾಗುತ್ತಿದೆ. ಮೇಲೆ ಓದಲಾದ ಕ್ರ.ಸಂ.(2)ರ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 04-07-2003 ರಿಂದ 03-07-2005ರವರೆಗೆ ಮಾತ್ರ ಮುಂದುವರೆಸಲಾಗಿತ್ತು. ಪುನ: ಈ ಹುದ್ದೆಗಳನ್ನು ಮುಂದುವರೆಸುವಂತೆ ಜಿಲ್ಲಾಧಿಕಾರಿಗಳು ಗುಲ್ಬರ್ಗಾ ಮತ್ತು ಮೈಸೂರು ಜಿಲ್ಲೆ ಇವರುಗಳು ಕೋರಿದ್ದು, ಕ್ರ.ಸಂ.(3) ರಲ್ಲಿ ಸರ್ಕಾರವು ಮೈಸೂರು ಹಾಗೂ ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿನ ತಹಶೀಲ್ದಾರ್ ಗ್ರೇಡ್-೩೩ ಶಿಷ್ಟಾಚಾರ ಹುದ್ದೆಗಳನ್ನು ದಿನಾಂಕ: 04-07-2005 ರಿಂದ ದಿನಾಂಕ: 03-07-2009 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಲಾಗಿತ್ತು.

ಈಗ ಪುನ: ಕ್ರ.ಸಂ. (4) ರಲ್ಲಿ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಇವರು ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಕಾರ್ಯಾಲಯದಲ್ಲಿನ ಶಿಷ್ಟಾಚಾರ ತಹಶೀಲ್ದಾರ್ ಹುದ್ದೆಯನ್ನು ಮುಂದುವರೆಸುವಂತೆ ಕೋರಿರುವುದರಿಂದ ಸರ್ಕಾರವು ಈ ಅಂಶಗಳನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 09 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 20-04-2010.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿನ ತಹಶೀಲ್ದಾರ್ ಗ್ರೇಡ್-2 ಶಿಷ್ಟಾಚಾರ ಹುದ್ದೆಯನ್ನು ದಿನಾಂಕ: 04-07-2009 ರಿಂದ 2 ವರ್ಷಗಳವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ: ಎಫ್‌ಡಿ 1 ಟಿಎಫ್‌ಸಿ 96, ದಿನಾಂಕ: 10–07–1996 ರಲ್ಲಿ ನೀಡಿರುವ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಪಿ.ಆರ್. 1173

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3).

**TRANSPORT SECRETARIAT**

**Sub** : Extension of pay scale applicable to Graduate Junior Engineers to the non-Graduate Junior Engineers- Implementation of the orders dated 19-01-2010 passed by the Hon'ble Supreme Court in SLP NO.16890/06(Civil Appeal No.3412/07)c/w SLP No.1006/07(Civil Appeal No.4515/07)- reg

**Read** :
1) Govt. Order No.PWD.385 SeSaki 95(p)dated 29-01-1998 read with Corrigendum dated 04-03-1998.
2) Orders dated 03-12-2002 passed by the Hon'ble KAT in Application No.2094-2181/98.
3) Orders dated 18-12-2004 passed by the Hon'ble High Court of Karnataka in W.P.No 43978-44070/03.
4) Orders dated 02-09-2005 passed by the Hon'ble High Court of Karnataka in Review Petition No. 314/05.
5) Orders dated 19-01-2010 passed by the Hon'ble Supreme Court In Civil Appeal No.3412/2007/c/w Civil Appeal No. 4515/2007.

**PREAMBLE:**

In pursurance of the Orders passed by the Hon'ble Supreme Court in Civil Appeal Nos.5816 to 5846 and other connected impleading Applications in the said Civil Appeals, Government, after careful consideration, by Government Order dated 29-01-1998 read with Corrigendum dated 04-03-1998 read at (1) above, Extended the pay scale applicable to Graduate Junior Engineers to the non-Graduate Junior Engineers of the Public Works Department subject to the following conditions:-

**(a)** that all the Applicants in A. Nos. 2874 to 2891 of 1988 (G.Narsimha Reddy & others) and the Applicants in A.Nos. 3016 to 3068/88 c/w A.Nos. 2914 to 2927 of 1988 (B.K. Gopala Krishna and others) Shall be entitled to the benefit of Government letter No.LoE 38 SeSaki 87 dated 04.12.1987 and their pay shall be fixed in the Graduate Junior Engineers' scale of pay with effect from 01.01.1957 or from the date of their appointment, as the case may be, and they shall be entitled to arrears of salary consequent upon such fixation of pay only up to 08.01.1974 or till they retired from service or till they ceased to be in service for any reason whatsoever, whichever is earlier. The same shall be drawn and paid to them, if not already done.

**(b)** that if any of the Applicants above named has been promoted to the cadre of Assistant Engineer (now Assistant Executive Engineer) during the period from 01.01.1957 to 08.01.1974, he shall be entitled to protection of his in the Graduate Junior Engineers' scale as on the date of his promotion as such and for regulation of his pay thereafter from time to time;

**(C)** that if any of the applicants above named has retired from service on or before 08.01.1974, he shall be entitled to pensionary benefits with reference to his pay fixed in the Graduate Junior Engineers' scale of pay.

**(D)** that the Applicants above named shall not be entitled to Graduate Junior Engineers' scale of pay after 09.01.1974, and with effect from that date, their pay shall be fixed in the scale of pay of non-Graduate Junior Engineer, not on the basis of the pay drawn by them in the scale

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1029 ವೆಚ್ಚ 7/2009 ದಿ: 29.12.2009 ರಲ್ಲಿ ಹೊಸ ಜಿಲ್ಲೆ ಸೃಜನೆ ಮಾಡುವ ಕುರಿತು ನೀಡಿರುವ ಸಹಮತಿ ಹಾಗೂ ಕಂದಾಯ ಇಲಾಖೆಯ ಆದೇಶ ಸಂಖ್ಯೆ: ಕಂಇ 71 ಭೂದಾಪು 2009 ದಿನಾಂಕ: 23.02.2010 ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1292

**ಬಿ.ಸಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
(ಸೇವೆಗಳು)

## ಶಿಕ್ಷಣ ಸಚಿವಾಲಯ

**ವಿಷಯ :** ಪ್ರಾಥಮಿಕ ಶಿಕ್ಷಣದಲ್ಲಿ **"ಶಿಕ್ಷಣದಲ್ಲಿ ಯಕ್ಷಗಾನ–ಯಕ್ಷಗಾನ ಶಿಕ್ಷಣ"** ಎಂಬ ವಿಷಯದ ಪಠ್ಯಕ್ರಮ ಅಳವಡಿಸುವ ಕುರಿತು.

**ಓದಲಾಗಿದೆ :** ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ರವರ ದಿ: 22.01.2010 ರ ಪತ್ರ ಸಂಖ್ಯೆ ಡಿಎಸ್ಇಆರ್‌ಟಿ/ ಇವಿಜಿ/ಯಕ್ಷಗಾನ/10/2009–10.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 22.01.2010 ರ ಪತ್ರದಲ್ಲಿ ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಇವರು **"ಶಿಕ್ಷಣದಲ್ಲಿ ಯಕ್ಷಗಾನ–ಯಕ್ಷಗಾನ ಶಿಕ್ಷಣ"** ಪಠ್ಯಕ್ರಮವನ್ನು ಅಳವಡಿಸುವಂತೆ ಕರ್ನಾಟಕ ಯಕ್ಷಗಾನ ಅಕಾಡಮಿಯ ಅಧ್ಯಕ್ಷರು ಸಲ್ಲಿಸಿದ ಮನವಿಯನ್ನು ಪರಿಶೀಲಿಸಿ, ಪ್ರಸ್ತಾವನೆ ಕಳಿಸಿರುತ್ತಾರೆ. ಈಗಾಗಲೇ ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿ (ಇತರೆ) ಬೆಂಗಳೂರು ಇವರು ಕರ್ನಾಟಕ ತಾಳವಾದ್ಯ, ಕೂಚುಪಡಿ, ಕಥಕ್ಕಳಿ, ಕರ್ನಾಟಕ–ಸಂಗೀತ ಇತ್ಯಾದಿಗಳ ವಿಷಯಗಳ ಬಗೆಗೆ ಜೂನಿಯರ್ ಸೀನಿಯರ್ ಪರೀಕ್ಷೆಗಳನ್ನು ನಡೆಸುತ್ತಿದ್ದು, ಇದೇ ರೀತಿ ಯಕ್ಷಗಾನದಲ್ಲಿಯೂ ಕೂಡ ಜೂನಿಯರ್, ಸೀನಿಯರ್ ಮತ್ತು ವಿದ್ವತ್ ಪರೀಕ್ಷೆಗಳಿಗೆ ಯಕ್ಷಗಾನವನ್ನು ಅಳವಡಿಸಬಹುದು ಎಂದು ತಿಳಿಸಿ ಯಕ್ಷಗಾನವನ್ನು ಇತರೆ ಪರೀಕ್ಷೆಗಳ ಅಡಿ ವಿದ್ಯಾರ್ಥಿಗಳು ಅಭ್ಯಾಸ ಮಾಡಲು ಅನುಮತಿ ಹಾಗೂ ಯಕ್ಷಗಾನ ಅಕಾಡಮಿಯವರು ಸಲ್ಲಿಸಿರುವ ಪಠ್ಯವಸ್ತುವನ್ನು ಸರ್ಕಾರವು ಅನುಮೋದಿಸಿ ಆದೇಶ ಹೊರಡಿಸಲು ಕೋರಿರುವರು. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 37 ಎಸ್‌ಟಿಬಿ 2010, ಬೆಂಗಳೂರು, ದಿನಾಂಕ 12–05–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಯಕ್ಷಗಾನ ವಿಷಯದಲ್ಲಿ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ (ಇತರೆ) ಬೆಂಗಳೂರು ಇವರಿಂದ ಪರೀಕ್ಷೆ ನಡೆಸಿ ಪ್ರಮಾಣ ಪತ್ರ ನೀಡಲು ಅನುಮೋದಿಸಿ ಆದೇಶಿಸಿದೆ. ಹಾಗೂ ಈ ಸಂಬಂಧವಾಗಿ ಪರೀಕ್ಷೆ ನಡೆಸುವ ವಿಧಿವಿಧಾನವನ್ನು ಕೂಡಲೇ ಅಂತಿಮಗೊಳಿಸಲು ಸಹ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1293

**ಎಂ.ಎನ್. ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ನೂತನವಾಗಿ ರಚಿಸಿರುವ ಯಾದಗಿರಿ ಜಿಲ್ಲೆಯಲ್ಲಿ ಆಯುಷ್ ಇಲಾಖೆಗೆ ಸಂಬಂಧಿಸಿದಂತೆ ಅಗತ್ಯವಿರುವ ಸಿಬ್ಬಂದಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ:ಕಂಇ 71 ಭೂದಾಪು 2009, ದಿನಾಂಕ: 23–02–2010.
2) ನಿರ್ದೇಶಕರು, ಆಯುಷ್ ಇಲಾಖೆ ಇವರ ಪತ್ರ ಸಂಖ್ಯೆ: ಆಯುಷ್/75/ಬಿಯುಡಿ(2)/2009–10, ದಿನಾಂಕ: 09–10–2009 & 16–04–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ದಿನಾಂಕ: 23–02–2010 ರ ಸರ್ಕಾರದ ಆದೇಶದಲ್ಲಿ, ಹೊಸದಾಗಿ ರಚಿಸಿರುವ ಯಾದಗಿರಿ ಜಿಲ್ಲೆಯಲ್ಲಿ ವಿವಿಧ ಇಲಾಖೆಗಳಿಗೆ ಸಂಬಂಧಿಸಿದಂತೆ ಸಿಬ್ಬಂದಿ ಮಾದರಿ ರಚನೆ ಅನ್ವಯ ಅವಶ್ಯವಿರುವ ಹುದ್ದೆಗಳಲ್ಲಿ ಶೇಕಡಾ 25 ರಷ್ಟು ಹುದ್ದೆಗಳನ್ನು ಸದ್ಯಕ್ಕೆ ಅಡ್–ಹಾಕ್ (Ad-hoc) ಆಧಾರದ ಮೇಲೆ ಸೃಜಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ದಿನಾಂಕ 09–10–2009 ಹಾಗೂ 16–04–2010 ರ ಪತ್ರಗಳಲ್ಲಿ, ಆಯುಷ್ ನಿರ್ದೇಶಕರು ಯಾದಗಿರಿ ಜಿಲ್ಲೆಯ ಜಿಲ್ಲಾ ಆಯುಷ್ ಕಛೇರಿಯನ್ನು ಪ್ರಾರಂಭಿಸಲು ಒಟ್ಟು 07 ಹುದ್ದೆಗಳು

ಅವಶ್ಯವಿದ್ದು, ಮೇಲಿನ ಕ್ರಮ ಸಂಖ್ಯೆ (1) ರ ಆದೇಶದನ್ವಯ ಅಡ್–ಹಾಕ್ ಆಧಾರದ ಮೇಲೆ ಈ ಕೆಳಕಂಡ 03 ಹುದ್ದೆಗಳನ್ನು (ಶೇಕಡಾ 25 ರಷ್ಟು) ಸೃಜಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

| ಕ್ರ. ಸಂ. | ಹುದ್ದೆ | ವೃಂದ | ವೇತನ ಶ್ರೇಣಿ (ರೂ. ಗಳಲ್ಲಿ) | ಹೊಸದಾಗಿ ಸೃಜಿಸಬೇಕಾದ ಹುದ್ದೆಗಳ ಸಂಖ್ಯೆ |
|---|---|---|---|---|
| 1 | ಜಿಲ್ಲಾ ಆಯುಷ್ ಅಧಿಕಾರಿಗಳು | ಎ | 14050–25050 | 1 |
| 2 | ದ್ವಿತೀಯ ದರ್ಜೆ ಸಹಾಯಕರು –ವ– ಕಂಪ್ಯೂಟರ್ ಆಪರೇಟರ್ | ಸಿ | 5800–10500 | 1 |
| 3 | 'ಡಿ' ದರ್ಜೆ | ಡಿ | 4800–7275 | 1 |
| ಒಟ್ಟು | | | | 3 |

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 399 ಪಿಐಎಂ 2009, ಬೆಂಗಳೂರು, ದಿನಾಂಕ 15–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಯಾದಗಿರಿ ಜಿಲ್ಲೆಯಲ್ಲಿ ಆಯುಷ್ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಆಯುಷ್ ಕಛೇರಿಯನ್ನು ಪ್ರಾರಂಭಿಸಲು ಮತ್ತು ಸಿಬ್ಬಂದಿ ಮಾದರಿ ರಚನೆ ಅನ್ವಯ ಅವಶ್ಯವಿರುವ ಹುದ್ದೆಗಳಲ್ಲಿ ಶೇಕಡಾ 25 ರಷ್ಟು ಹುದ್ದೆಗಳನ್ನು ಸದ್ಯಕ್ಕೆ ಅಡ್‌ಹಾಕ್ (Ad-hoc) ಆಧಾರದ ಮೇಲೆ ಈ ಕೆಳಕಂಡಂತೆ ಸೃಜಿಸಲು ಈ ಮೂಲಕ ಮಂಜೂರಾತಿ ನೀಡಿದೆ. ಹಾಗೂ ಗ್ರೂಪ್ 'ಡಿ' ಹುದ್ದೆಯನ್ನು ಹೊರ ಗುತ್ತಿಗೆ (Out Source) ಆಧಾರದ ಮೇಲೆ ತುಂಬಲು ಅನುಮತಿಸಿದೆ.

| ಕ್ರ. ಸಂ. | ಹುದ್ದೆ | ವೃಂದ | ವೇತನ ಶ್ರೇಣಿ (ರೂ. ಗಳಲ್ಲಿ) | ಹೊಸದಾಗಿ ಸೃಜಿಸಬೇಕಾದ ಹುದ್ದೆಗಳ ಸಂಖ್ಯೆ |
|---|---|---|---|---|
| 1 | ಜಿಲ್ಲಾ ಆಯುಷ್ ಅಧಿಕಾರಿಗಳು | ಎ | 14050–25050 | 1 |
| 2 | ದ್ವಿತೀಯ ದರ್ಜೆ ಸಹಾಯಕರು–ವ–ಕಂಪ್ಯೂಟರ್ ಆಪರೇಟರ್ | ಸಿ | 5800–10500 | 1 |
| ಒಟ್ಟು | | | | 2 |

ಈ ಹುದ್ದೆಗಳಿಗೆ ಆಯವ್ಯಯದಲ್ಲಿ ಅವಕಾಶ ಕಲ್ಪಿಸಿಕೊಳ್ಳಲು ತಿಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1294

**ಆರ್.ಎಸ್. ಇಟಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಪಿ.ವೈ. ರಾಜೇಂದ್ರ ಕುಮಾರ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಅವರ ವಿರುದ್ಧ ಮರು ಇಲಾಖೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಲು ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ಇಮುವಿ 2008, ದಿನಾಂಕ: 17.01.2009
2) ಶ್ರೀ ಎನ್. ಸುಬ್ಬರಾವ್, ವಿಚಾರಣಾಧಿಕಾರಿ, ಇವರ ಅಂತಿಮ ವರದಿ ದಿನಾಂಕ : 15.10.2009.
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 06 ಇಮುವಿ 2008, ದಿನಾಂಕ: 03.09.2009.
4) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಇಡಿ 411 ಎಲ್‌ಐಬಿ 2009, ದಿನಾಂಕ: 09.03.2010.

**ಪ್ರಸ್ತಾವನೆ :**

ಶ್ರೀ ಪಿ.ವೈ. ರಾಜೇಂದ್ರ ಕುಮಾರ್, ನಿವೃತ್ತ ನಿರ್ದೇಶಕರು, ಇವರು ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇಲ್ಲಿ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರು ತಮ್ಮ ಅಧಿಕಾರದ ಅವಧಿಯಲ್ಲಿ ಗಣಕ ಯಂತ್ರಗಳ ಖರೀದಿಯಲ್ಲಿ ನಿಯಮಗಳನ್ನು ಉಲ್ಲಂಘಿಸಿ ಕರ್ತವ್ಯ ಲೋಪ ಹಾಗೂ ಹಣ ದುರುಪಯೋಗ ಎಸಗಿರುವ ಮತ್ತು ಅಧಿಕಾರ

ದುರುಪಯೋಗ ಪಡಿಸಿಕೊಂಡಿರುವ ಒಟ್ಟು 7 ಆರೋಪಗಳಿಗಾಗಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ 17-01-2009ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ಎಂ. ಸುಬ್ಬರಾವ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಶ್ರೀ ಎನ್.ಎಫ್. ನಾಗೇಶ್, ಉಪ ನಿರ್ದೇಶಕರು, ನಗರ ಕೇಂದ್ರ ಗ್ರಂಥಾಲಯ, ಜಯನಗರ, ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿಯೂ ನೇಮಕ ಮಾಡಲಾಗಿತ್ತು. ಮೇಲೆ (2)ರಲ್ಲಿ ಓದಲಾದ ದಿನಾಂಕ: 15.10.2009ರಂದು ವಿಚಾರಣಾಧಿಕಾರಿಗಳು ವಿಚಾರಣಾ ವರದಿ ಸಲ್ಲಿಸಿದ್ದು, ಸದರಿ ವಿಚಾರಣಾ ವರದಿಯಲ್ಲಿ ಸತ್ಯಾಪನಾ ಸಮಿತಿಯ ವರದಿಯು ಅಪೂರ್ಣವಾಗಿದ್ದು ಹಾಗೂ ಸಾಕ್ಷಿಗಳು ಆರೋಪಗಳ ಬಗ್ಗೆ ಸಾಕ್ಷಿ ನೀಡಿರುವುದಿಲ್ಲವೆಂಬ ಕಾರಣಕ್ಕಾಗಿ ಆರೋಪವು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ. ಆದರೆ ವಿಚಾರಣೆಯಲ್ಲಿ ಕೆಲವು ದಾಖಲೆ ಹಾಗೂ ಸಾಕ್ಷ್ಯಗಳ ಕೊರತೆಯಿಂದಾಗಿ ಈ ಆರೋಪಗಳು ಅರ್ಹತೆಯ ಆಧಾರದ ಮೇಲೆ ನಿರ್ಣಯ ಕೈಗೊಳ್ಳಲಾಗಿಲ್ಲದ್ದರಿಂದ ಇದನ್ನು ಪರಿಶೀಲಿಸಿದ ಸರ್ಕಾರವು ಸದರಿ ಆರೋಪಗಳ ಕುರಿತಂತೆ ಮರು ವಿಚಾರಣೆ ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 06 ಇಮುವಿ 2009, ಬೆಂಗಳೂರು, ದಿನಾಂಕ 15-05-2010**

ಶ್ರಿ ಪಿ.ವೈ. ರಾಜೇಂದ್ರ ಕುಮಾರ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಇವರ ವಿರುದ್ಧ ಮೇಲೆ ವಿವರಿಸಲ್ಪಟ್ಟ ಆರೋಪಗಳ ಕುರಿತು ಮರು ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1947ರ ನಿಯಮ 11ಎನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಪ್ರಕರಣವನ್ನು ಶ್ರೀ ಎಂ. ಸುಬ್ಬರಾವ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರಿಗೆ ಮರು ವಿಚಾರಣೆಗಾಗಿ ಹಿಂತಿರುಗಿಸಿದೆ.

ಮುಂದುವರೆದು ಮೇಲ್ಕಂಡ ನಿಯಮಾವಳಿಗಳ ನಿಯಮ 11(5)(ಸಿ)ರನ್ವಯ ಮೇಲೆ 3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಆರ್.ಕೆ. ಬಡಿಗಣ್ಣವರ್, ಉಪ ನಿರ್ದೇಶಕರು, ಜಿಲ್ಲಾ ಕೇಂದ್ರ ಗ್ರಂಥಾಲಯ (ಗ್ರಾಮಾಂತರ) ವಿಜಯನಗರ, ಬೆಂಗಳೂರು ಇವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ಮಂಡಿಸಲು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿರುವುದನ್ನು ಮುಂದುವರಿಸಿದೆ.

ವಿಚಾರಣಾಧಿಕಾರಿಗಳು ಈ ಮರು ವಿಚಾರಣೆಗಾಗಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇಇವಿ 2007, ದಿನಾಂಕ: 11.04.2008ರಲ್ಲಿ ನಿಗದಿಪಡಿಸಿರುವ ಗೌರವ ಧನ ಹಾಗೂ ವಾಹನ ಭತ್ಯೆಗಳನ್ನು ಪಡೆಯುತ್ತಾರೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಸ್ಟೇಷನರಿ, ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸಲು ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಅವರು ಕ್ರಮಕೈಗೊಳ್ಳುತ್ತಾರೆ.

ವಿಚಾರಣಾಧಿಕಾರಿಗಳು ಆಪಾದಿತ ಮೇಲಿನ ಆರೋಪಗಳಿಗೆ ಮರು ವಿಚಾರಣೆ ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಅಭಿಪ್ರಾಯಗಳನ್ನು ಒಳಗೊಂಡ ಮರು ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1295

**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವೆಗಳು-3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎಸ್.ಬಿ. ಬಿರಾದಾರ್, ಹಾಗೂ ಬಿ.ಎನ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್‌ಗಳು ಇವರುಗಳ ವಿರುದ್ಧ ಇಲಾಖಾ ವಿಚಾರಣೆ-ಶ್ರೀ ಎಸ್.ಬಿ. ಬಿರಾದಾರ್, ಇವರಿಗೆ ದಂಡನೆ ವಿಧಿಸಿ ಹಾಗೂ ಶ್ರೀ ಟಿ.ಎನ್. ಚಂದ್ರಶೇಖರಯ್ಯ, ಇವರನ್ನು ಆರೋಪಗಳಿಂದ ದೋಷಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 244 ಎಸ್‌ಇಎನ್ 2006, ದಿನಾಂಕ: 17.12.2007
2) ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಸಿಎ (ಇವಿ)ಸಿಆರ್/68/2007-08 ದಿನಾಂಕ: 13.08.2008
3) ನೋಟೀಸ್ ಸಂಖ್ಯೆ: ಸಿಆಸುಇ 244 ಎಸ್‌ಇಎನ್ 2002, ದಿನಾಂಕ 24.09.2009
4) ಶ್ರೀ ಎಸ್.ಬಿ. ಬಿರಾದಾರ್, ನಿವೃತ್ತ ಮುಖ್ಯ ಇಂಜಿನಿಯರ್, ಅವರ ಉತ್ತರ ದಿನಾಂಕ: 12.10.2009
5) ಕರ್ನಾಟಕ ಲೋಕಸೇವಾ ಆಯೋಗಕ್ಕೆ ಬರೆಯಲಾದ ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ 244 ಎಸ್‌ಇಎನ್ 2002, ದಿನಾಂಕ 05.01.2010.
6) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಅವರ ಪತ್ರ ಸಂಖ್ಯೆ: ಪಿಎಸ್‌ಸಿ 205 ಸಿಎನ್‌ಎಸ್ 09, ದಿನಾಂಕ: 20.03.2010.

**ಪ್ರಸ್ತಾವನೆ :**

ಶ್ರೀ ಎಸ್.ಬಿ. ಬಿರಾದಾರ್, ನಿವೃತ್ತ ಮುಖ್ಯ ಇಂಜಿನಿಯರ್ ಇವರು ದಿನಾಂಕ: 06.09.2001 ರಿಂದ 14.08.2002ರ ಅವಧಿಯಲ್ಲಿ ಕೆಳಕಂಡ ಮುಖ್ಯ ಇಂಜಿನಿಯರ್ ಹುದ್ದೆಯ ಹೆಚ್ಚುವರಿ ಪ್ರಭಾರದಲ್ಲಿ ಹಾಗೂ ಶ್ರೀ ಬಿಎನ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ಇವರು ದಿನಾಂಕ: 26.02.2003 ರಿಂದ 19.06.2003ರವರೆಗೆ ಮುಖ್ಯ ಇಂಜಿನಿಯರ್ ಆಗಿ ನಂ. 1. ಹೇಮಾವತಿ ಬಲ ಮೇಲ್ದಂಡೆ ನಾಲಾ ವಿಭಾಗ, ಗೋರೂರು ಇಲ್ಲಿ ಈ ಇಬ್ಬರು ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದಾಗ ಹೇಮಾವತಿ ಬಲ ಮೇಲ್ದಂಡೆ ಕಲ್ಲು ಕಟ್ಟಡ ನಿರ್ಮಾಣ ಹಾಗೂ ಇತರೆ ನಾಲಾ ಕೆಲಸಗಳಲ್ಲಿ ಅಕ್ರಮ ಅವ್ಯವಹಾರ ಹಾಗೂ ನಾಲಾ ವ್ಯಾಪ್ತಿಯಲ್ಲಿ ಬರುವ ಮಲ್ಲನಕೆರೆ ಮತ್ತು ಗೊರಗುಂಡಿ ಕೆರೆ ಕೋಡಿಗಳಿಗೆ ತಾತ್ಕಾಲಿಕ ಮಣ್ಣೇರಿ ನಿರ್ಮಾಣ ಕೆಲಸದಲ್ಲಿ ಅಕ್ರಮ ಅವ್ಯವಹಾರಗಳನ್ನು ನಡೆಸಿದ ದುರ್ನಡತೆಯ ಆರೋಪಗಳಿಗಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ 17.12.2007ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ, ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು, ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ: 17.10.2008ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು.

ಶ್ರೀ ಎಸ್.ಬಿ. ಬಿರಾದಾರ್, (06.09.2001 ರಿಂದ 14.08.2002) ಅವರು ಒಟ್ಟು 15 ಕಾಮಗಾರಿಗಳನ್ನು ಟೆಂಡರ್ ಕರೆಯದೇ ಅವರ ಹಂತದಲ್ಲಿಯೇ ಗುತ್ತಿಗೆದಾರರಿಗೆ ಕಾಮಗಾರಿ ಆದೇಶ ನೀಡಿದ್ದಾರೆ ಇದರಲ್ಲಿ ಒಂದು ಪ್ರಕರಣವು ಮಾತ್ರ ರೂ. 75,500/–ಗಳ ವೆಚ್ಚವನ್ನು ಹೊಂದಿದೆ ಉಳಿದ ಎಲ್ಲಾ ಕಾಮಗಾರಿಗಳೂ ಸಹ ರೂ. 1.00 ಲಕ್ಷಕ್ಕಿಂತ ಹೆಚ್ಚಿನ ಮೊತ್ತವನ್ನು ಒಳಗೊಂಡಿದೆ. ಒಂದು ಕಾಮಗಾರಿಯಂತೂ ಅತ್ಯಂತ ಹೆಚ್ಚಿನ ಮೊತ್ತ ರೂ. 32.00 ಲಕ್ಷಗಳನ್ನು ಒಳಗೊಂಡಿದೆ. ಇವುಗಳನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯಿದೆ 1999ರ ವಿಧಿವಿಧಾನಗಳನ್ನು ಅನುಸರಿಸಬೇಕಿತ್ತು ಆದರೆ ಅವುಗಳನ್ನು ಅನುಸರಿಸಿಲ್ಲ. ಇದಕ್ಕೆ ಆರೋಪಿಯು ನೀಡುವ ಸಮಜಾಯಿಷಿ ಅಂದರೆ ಈ ಕಾಮಗಾರಿಗಳು ತುರ್ತಾದ ಕಾಮಗಾರಿಗಳಾಗಿದ್ದವು ಆದರೆ ವಿಚಾರಣೆಯಲ್ಲಿ ಕಂಡುಬಂದಿರುವಂತೆ ಅವು ತುರ್ತಾದ ಕಾಮಗಾರಿಗಳಾಗಿರಲಿಲ್ಲ. ತುರ್ತು ಕಾಮಗಾರಿ ಎಂದು ಆರೋಪಿಯು ಪರಿಗಣಿಸಿ ಟೆಂಡರ್ ಪ್ರಕ್ರಿಯೆಯನ್ನು ಅನುಸರಿಸದೇ ಕೊಟೇಷನ್ ಮೂಲಕ ಗುತ್ತಿಗೆ ಕಾರ್ಯವನ್ನು ವಹಿಸಿದ್ದರೂ ಸಹ ಟೆಂಡರ್ ಪ್ರಕ್ರಿಯೇ ಮುಖಾಂತರ ಕಾಮಗಾರಿ ಪೂರ್ಣಗೊಳ್ಳಲು ತೆಗೆದುಕೊಳ್ಳುವ ಅವಧಿಯನ್ನೇ ತೆಗೆದುಕೊಂಡಿದೆ ಹೀಗಾಗಿ ಇದನ್ನು ಕೈಗೊಳ್ಳುವ ಮೂಲಕ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯಿದೆ 1999ರ ವಿಧಿವಿಧಾನಗಳನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗಿದ್ದು ಆರೋಪ ಸಾಬೀತಾಗಿದೆ.

ಶ್ರೀ ಬಿ.ಎನ್. ಚಂದ್ರಶೇಖರಯ್ಯ (26.02.2003 ರಿಂದ 19.06.2003) ಇವರು ಕೈಗೊಂಡ ಎರಡು ಕಾಮಗಾರಿಗಳ ಮೊತ್ತವು ರೂ. 1.00 ಲಕ್ಷವನ್ನು ಮೀರಿಲ್ಲ ಸದರಿ ಕಾಮಗಾರಿಯನ್ನು ಇವರು ಗುತ್ತಿಗೆಗೆ ನೀಡಿರುವುದಿಲ್ಲ. ಇವರ ಪೂರ್ವಾಧಿಕಾರಿ 1ನೇ ಆರೋಪಿಯು ಆಗಲೇ ನೀಡಿದ್ದ ಕಾಮಗಾರಿಗೆ ಇವರು ಹಣವನ್ನು ಪಾವತಿಸಿರುತ್ತಾರೆ. ಒಂದು ಕಾಮಗಾರಿಯು ರೂ. 49, 969/– ಗಳಾಗಿದ್ದು, ಇನ್ನೊಂದು ರೂ. 27,320/–ಗಳಾಗಿರುತ್ತದೆ. ಒಟ್ಟು ಮೊತ್ತ ರೂ. 77,269/– ಗಳಾಗಿರುತ್ತದೆ. ಇವರಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯಿದೆ 1999ರ ವಿಧಿವಿಧಾನಗಳು ಉಲ್ಲಂಘನೆಯಾಗಿರುವುದಿಲ್ಲ. ಆದ್ದರಿಂದ ಆರೋಪ ಸಾಬೀತಾಗಿಲ್ಲ.

ವಿಚಾರಣಾ ವರದಿಯ ಪ್ರತಿಯೊಡನೆ, ಮೇಲೆ (3)ರಲ್ಲಿ ಓದಲಾದ ದಿನಾಂಕ 24.09.2009ರ 2ನೇ ಕಾರಣ ಕೇಳುವ ನೋಟೀಸನ್ನು ಆರೋಪಿತ ಅಧಿಕಾರಿಯವರಾದ ಶ್ರೀ ಎಸ್.ಬಿ. ಬಿರಾದಾರ್, ನಿವೃತ್ತ ಮುಖ್ಯ ಇಂಜಿನಿಯರ್, ಇವರಿಗೆ ಜಾರಿ ಮಾಡಿ ವಿಚಾರಣಾ ವರದಿ ಕುರಿತು ಅಹವಾಲು ಇದ್ದಲ್ಲಿ ಅದನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಆರೋಪಿತ ಅಧಿಕಾರಿಯವರು ಮೇಲೆ (4)ರಲ್ಲಿ ಓದಲಾದ ದಿನಾಂಕ 12.10.2009ರ ಹೇಳಿಕೆಯನ್ನು ಸಲ್ಲಿಸಿ, ರೈತರ ಹಿತದೃಷ್ಟಿಯಿಂದ ಸದರಿ ಕಾಮಗಾರಿಗಳನ್ನು ತುರ್ತಾಗಿ ಮುಗಿಸಬೇಕಾಗಿದ್ದ ಕಾರಣ ಕಾಮಗಾರಿಗಳನ್ನು 182 ಕ್ಲಾಸ್ ಆಧಾರದ ಮೇಲೆ ನೇರವಾಗಿ ಗುತ್ತಿಗೆದಾರರಿಗೆ ವಹಿಸಲಾಗಿದ್ದು, ಇವರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವೆಂದು ಹಾಗೂ ಮುಂದಿನ ಆರ್ಥಿಕ ವರ್ಷದಲ್ಲಿ ದರಪಟ್ಟಿಯ ದರಗಳು ಹೆಚ್ಚುವರಿಯಾಗುವ ಸಂಭವವಿದ್ದು, ಕಾಮಗಾರಿಗಳ ಮೊತ್ತವು ಹೆಚ್ಚುವರಿ ಆಗುವ ಸಾಧ್ಯತೆ ಇದ್ದುದರಿಂದ ಆರ್ಥಿಕ ಹೊರೆಯನ್ನು ತಪ್ಪಿಸಲು ಈ ಕಾಮಗಾರಿಗಳನ್ನು ಅಚ್ಚುಕಟ್ಟು ಪ್ರದೇಶಕ್ಕೆ ತುರ್ತಾಗಿ ನೀರನ್ನು ಸಮರ್ಪಕವಾಗಿ ಪೂರೈಸಲು ಯಾವುದೇ ಆರ್ಥಿಕ ಹೊರೆಯಾಗದಂತೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ನೇರವಾಗಿ ಗುತ್ತಿಗೆದಾರರಿಗೆ ವಹಿಸಲಾಗಿದೆ ಎಂದು ತಿಳಿಸಿ ತಮ್ಮನ್ನು ಆರೋಪ ಮುಕ್ತರನ್ನಾಗಿಸಬೇಕೆಂದು ಕೋರಿದ್ದಾರೆ.

ಸದರಿಯವರ ಲಿಖಿತ ಹೇಳಿಕೆ/ಉತ್ತರವನ್ನು ವಿಚಾರಣಾ ವರದಿ ಹಾಗೂ ದಾಖಲೆಗಳೊಡನೆ ಮತ್ತೆ ವಿವರವಾಗಿ ಪರಿಶೀಲಿಸಲಾಗಿದೆ. ಈ ಪ್ರಕರಣದಲ್ಲಿ ಶ್ರೀ ಎಸ್.ಬಿ. ಬಿರಾದಾರ್, ನಿವೃತ್ತ ಮುಖ್ಯ ಇಂಜಿನಿಯರ್ ಇವರು ಕೈಗೊಂಡ 15 ಕಾಮಗಾರಿಗಳ ಪೈಕಿ 6 ಕಾಮಗಾರಿಗಳು ರೂ. 20.00 ಲಕ್ಷಗಳಿಗಿಂತ ಹೆಚ್ಚಿನ ಮೊತ್ತದ ಕಾಮಗಾರಿಗಳಾಗಿದ್ದು, ಯಾವುದೇ ಅನುಮೋದನೆ ಇಲ್ಲದೆ ಮತ್ತು ಪಾರದರ್ಶಕ ಕಾಯಿದೆಯಿಂದ ವಿನಾಯಿತಿಯನ್ನು ಪಡೆಯದೇ ಅವರ ಹಂತದಲ್ಲಿಯೇ ಗುತ್ತಿಗೆದಾರರಿಗೆ ಕಾಮಗಾರಿಗಳನ್ನು ವಹಿಸಿರುವುದು ಕಾನೂನು ಬಾಹಿರವಾಗಿರುತ್ತದೆ. ಶ್ರೀ ಎಸ್.ಬಿ. ಬಿರಾದಾರ್ ನಿವೃತ್ತ ಮುಖ್ಯ

ಇಂಜಿನಿಯರ್ ಅವರಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯಿದೆ 1999ರ ವಿಧಿ ವಿಧಾನಗಳ ಉಲ್ಲಂಘನೆ ಆಗಿದೆ. ಆದ್ದರಿಂದ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಸರ್ಕಾರವು ಕರ್ನಾಟಕ ಲೋಕಾಸೇವಾ ಆಯೋಗದ ಸಹಮತಿಯೊಡನೆ (ಉಲ್ಲೇಖ 6) ಶ್ರೀ ಎಸ್.ಬಿ. ಬಿರಾದಾರ್, ನಿವೃತ್ತ ಮುಖ್ಯ ಇಂಜಿನಿಯರ್, ಇವರಿಗೆ ದಂಡನೆ ವಿಧಿಸಲು ಹಾಗೂ ಶ್ರೀ ಬಿ.ಎನ್. ಚಂದ್ರಶೇಖರಯ್ಯ ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧದ ಆರೋಪಗಳು ಸಾಬೀತಾಗಿಲ್ಲದ ಕಾರಣ ಅವರನ್ನು ಆರೋಪಗಳಿಂದ ಮುಕ್ತರನ್ನಾಗಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 244 ಎಸ್‌ಇಎನ್ 2006, ಬೆಂಗಳೂರು, ದಿನಾಂಕ 15–05–2010**

ಕರ್ನಾಟಕ ನಾಗರೀಕ ಸೇವಾ ನಿಯಾಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್. ಬಿ. ಬಿರಾದಾರ್, ನಿವೃತ್ತ ಮುಖ್ಯ ಇಂಜಿನಿಯರ್, ಅವರ ಮಾಸಿಕ ವಿಶ್ರಾಂತಿ ವೇತನದ ಶೇಕಡಾ 15 ರಷ್ಟು ಮೊತ್ತವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 2 ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸುತ್ತದೆ ಹಾಗೂ ಶ್ರೀ ಬಿ.ಎನ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ಅವರನ್ನು ಪ್ರಸ್ತಾವನೆಯಲ್ಲಿ ವಿವರಿಸಿದ ಆರೋಪ ಮುಕ್ತರನ್ನಾಗಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ಬಿ.ಎನ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ಇವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ, ಅವುಗಳನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವೆಗಳು–3)

ಪಿ.ಆರ್. 1296

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಅಧಿಸೂಚನೆ

ಸಂಖ್ಯೆ : ಸಿಆಸುಇ 101 ಎಸ್‌ಐಎಸ್ 2010, ಬೆಂಗಳೂರು, ದಿನಾಂಕ 14–05–2010

ಶ್ರೀ ಅನಿಲ್ ಕುಮಾರ್ ಝಾ, ಐ.ಎ.ಎಸ್., ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ), ಬೆಂಗಳೂರು ಇವರಿಗೆ ದಿನಾಂಕ 31–5–2010 ರಿಂದ 25–6–2010ರ ವರೆವಿಗೆ (ಉದಿಸೇ) 26 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ.

ಶ್ರೀ ಅನಿಲ್ ಕುಮಾರ್ ಝಾ, ಐ.ಎ.ಎಸ್., ರವರ ರಜಾ ಅವಧಿಯಲ್ಲಿ ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆಯವ್ಯಯ ಮತ್ತು ಸಂಪನ್ಮೂಲ), ಬೆಂಗಳೂರು, ಇವರನ್ನು ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ), ಬೆಂಗಳೂರು ಈ ಹುದ್ದೆಯ ಅಧಿಕ ಪ್ರಭಾರದಲ್ಲಿಡಲಾಗಿದೆ.

ಶ್ರೀ ಅನಿಲ್ ಕುಮಾರ್ ಝಾ, ಐ.ಎ.ಎಸ್., ರವರು ರಜೆಯ ಮೇಲೆ ಹೋಗಿರದಿದ್ದರೆ, ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ), ಬೆಂಗಳೂರು, ಈ ಹುದ್ದೆಯಲ್ಲೇ ಸ್ಥಾನಪನ್ನರಾಗಿರುತ್ತಿದ್ದರೆಂದು ದೃಢೀಕರಿಸಿದೆ.

ಶ್ರೀ ಅನಿಲ್ ಕುಮಾರ್ ಝಾ, ಐ.ಎ.ಎಸ್., ರವರಿಗೆ ಮೇಲ್ಕಂಡ ರಜೆ ಅವಧಿಯಲ್ಲಿ ಅವರ ಕುಟುಂಬದ ಈ ಕೆಳಕಾಣಿಸಿದ ಸದಸ್ಯರೊಂದಿಗೆ ಪ್ರಸಕ್ತ 2008–09ರ ವಿಸ್ತರಿಸಿದ ಬ್ಲಾಕ್ ಅವಧಿಯಲ್ಲಿ ಸ್ವಗ್ರಾಮ ಪ್ರಯಾಣ ರಿಯಾಯಿತಿ ಸೌಲಭ್ಯವನ್ನು ಉಪಯೋಗಿಸಿಕೊಂಡು ದೀಪ್, ಮಧುಬನಿ ಜಿಲ್ಲೆ, ಬಿಹಾರಕ್ಕೆ ಹೋಗಿ–ಬರಲು ಅನುಮತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು | ಸಂಬಂಧ |
|---|---|---|
| 1. | ಶ್ರೀ ಅನಿಲ್ ಕುಮಾರ್ ಝಾ | ಸ್ವತಃ |
| 2. | ಶ್ರೀಮತಿ ನೀರಜಾ ಝಾ | ಪತ್ನಿ |
| 3. | ಚಿ. ನಿರಂಜನ್ ಝಾ | ಮಗ |
| 4. | ಕು. ನಿರುಪಮಾ ಝಾ | ಮಗಳು |

ಸದರಿ ಉದ್ದೇಶಕ್ಕಾಗಿ ತಗಲುವ ವಾಸ್ತವಿಕ ಪ್ರಯಾಣ ವೆಚ್ಚದ ಶೇಕಡ 90ರಷ್ಟು ಹಣವನ್ನು ಅಂತಿಮ ಪ್ರಯಾಣಭತ್ಯೆ ಬಿಲ್ಲಿನಲ್ಲಿ ಹೊಂದಾಣಿಕೆ ಮಾಡುವ ಷರತ್ತಿಗೆ ಒಳಪಟ್ಟು ಮುಂಗಡ ಪ್ರಯಾಣಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಜೆ. ಅನಂತ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು–1)

ಪಿ.ಆರ್. 1334

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯಕ್ಕೆ ಧಾರವಾಡದ ರಾಯಪುರದಲ್ಲಿರುವ ರೇಷ್ಮೆ ಇಲಾಖೆಯ ಖಾಲಿ ಇರುವ ಕಟ್ಟಡಗಳನ್ನು ತಾತ್ಕಾಲಿಕವಾಗಿ ನೀಡುವ ಬಗ್ಗೆ.

**ಓದಲಾಗಿದೆ** : 1) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ : ರೇಬಿರೇಕ್ಷೇ/ಕಟ್ಟಡ/ಕಾವಿ/ವಿದ್ಯಾ/20/2009-10, ದಿನಾಂಕ 9-4-2010.

2) ಸರ್ಕಾರದ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಲಾ 18 ಕೆಎಲ್ಎಂ 2010, ದಿನಾಂಕ 16-4-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರು ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯದ ಅಧಿನಿಯಮ 2009 ರನ್ವಯ ಕರ್ನಾಟಕ ರಾಜ್ಯದಲ್ಲಿರುವ ಎಲ್ಲಾ ಕಾನೂನು ಕಾಲೇಜುಗಳನ್ನು ಕಾನೂನು ವಿಶ್ವವಿದ್ಯಾಲಯದ ಅಡಿಯಲ್ಲಿ ಒಳಪಡಿಸಿ, ಕೇಂದ್ರ ಕಛೇರಿಯನ್ನು ಹುಬ್ಬಳ್ಳಿಯಲ್ಲಿ ತೆರೆಯಲಾಗಿದ್ದು, ಸದರಿ ವಿಶ್ವವಿದ್ಯಾಲಯಕ್ಕೆ ಸುಸಜ್ಜಿತ ಕಟ್ಟಡಗಳನ್ನು ನಿರ್ಮಾಣ ಮಾಡಲು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದ್ದು ಸಧ್ಯಕ್ಕೆ ಈಗಾಗಲೆ ಪ್ರಾರಂಭಿಸಿರುವ 5 ವರ್ಷದ ಬಿ.ಎ., ಎಲ್.ಎಲ್.ಬಿ., ಬಿ.ಬಿ.ಎ., ಎಲ್.ಎಲ್.ಬಿ., ಎಲ್.ಎಲ್.ಎಂ. ಪಿ.ಹೆಚ್.ಡಿ. ಹಾಗೂ ಸರ್ಟಿಫಿಕೇಟ್ ಕೋರ್ಸ್‌ಗಳನ್ನು ನಡೆಸುವುದಕ್ಕೆ ಮತ್ತು ವಿಶ್ವವಿದ್ಯಾಲಯದ ಆಡಳಿತಾತ್ಮಕ ಮತ್ತು ಶೈಕ್ಷಣಿಕ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಲು ತುಂಬಾ ಅನಾನುಕೂಲವಾಗಿದೆ. ವಿಶ್ವವಿದ್ಯಾಲಯದ ಜಮೀನಿಗೆ ಹೊಂದಿಕೊಂಡಂತೆ ರೇಷ್ಮೆ ಇಲಾಖೆಯ ಒಡೆತನದಲ್ಲಿರುವ ಹಲವಾರು ಕಟ್ಟಡಗಳು ಖಾಲಿ ಇದ್ದು, ಅದನ್ನು ಇಲಾಖೆಯು ಸದ್ಯಕ್ಕೆ ಉಪಯೋಗಿಸುತ್ತಿಲ್ಲವಾದ್ದರಿಂದ ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯವು ಪರಿಣಾಮಕಾರಿಯಾಗಿ ಸಮಸ್ಯೆಯಿಲ್ಲದೆ ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಲು ಅದರ ಸ್ವಂತ ಕಟ್ಟಡಗಳು ನಿರ್ಮಾಣವಾಗುವವರೆಗೆ ಅಂದರೆ ಸುಮಾರು 2-3 ವರ್ಷದ ಅವಧಿಗೆ ಲೀಸ್ ಆಧಾರದ ಮೇಲೆ ಈ ಕೆಳಕಂಡ ಕಟ್ಟಡಗಳನ್ನು ನೀಡಲು ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

1. ಒಂದು ಮೌಂಟಿಂಗ್ ಹಾಲ್ (ಸುಮಾರು 800 ಚದರಡಿ)
2. ರೇಷ್ಮೆ ಬಿತ್ತನೆಕೋಠಿಯ ಮೊದಲನೆ ಮಹಡಿಯ ಪೂರ್ಣ ಕಟ್ಟಡ (ಸುಮಾರು 10000 ಚದರಡಿ) ಹಾಗೂ
3. ಬಿತ್ತನೆ ಕೋಠಿಯ ವಸತಿ ಗೃಹ (ಸುಮಾರು 1500 ಚದರಡಿ)

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು, ಸರ್ಕಾರದ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರು ನೂತನವಾಗಿ ಹುಬ್ಬಳ್ಳಿ ನಗರದಲ್ಲಿ ಸ್ಥಾಪನೆಗೊಂಡಿರುವ ಕಾನೂನು ವಿಶ್ವವಿದ್ಯಾಲಯದ ಚಟುವಟಿಕೆಗಳನ್ನು ನಿರ್ವಹಿಸಲು ಸ್ವಂತ ಕಟ್ಟಡ ನಿರ್ಮಾಣವಾಗುವವರೆಗೆ ಧಾರವಾಡದ ರಾಯಪುರ ಸಂಕೀರ್ಣದಲ್ಲಿರುವ ಒಂದು ಮೌಂಟಿಂಗ್ ಹಾಲ್ ಸುಮಾರ 800 ಚದರಡಿ, ರೇಷ್ಮೆ ಬಿತ್ತನೆ ಕೋಠಿಯ ಮೊದಲನೆ ಮಹಡಿಯ ಕಟ್ಟಡ ಸುಮಾರು 10000 ಚದರಡಿ, ಬಿತ್ತನೆಕೋಠಿಯ ವಸತಿ ಗೃಹ ಸುಮಾರು 1500 ಚದರಡಿಗಳನ್ನು ನೀಡುವಂತೆ ಕೋರಿದ್ದು, ಸದರಿ ಕಟ್ಟಡಗಳಿಗೆ ದುರಸ್ತಿ ಅಗತ್ಯವಿದ್ದು ಅದಕ್ಕೆ ತಗಲುವ ವೆಚ್ಚವನ್ನು ಕಾನೂನು ವಿಶ್ವವಿದ್ಯಾಲಯವೇ ಭರಿಸಲು ಸಿದ್ಧವಿದೆಯೆಂದು ತಿಳಿಸಿರುವುದಾಗಿ ಹೇಳಿ ಕಾನೂನು ವಿಶ್ವವಿದ್ಯಾಲಯ ನಿರ್ಮಾಣವಾಗುವವರೆಗೆ ಇಲಾಖೆಗೆ ಮೇಲ್ಕಂಡ 3 ಕಟ್ಟಡಗಳನ್ನು ತಾತ್ಕಾಲಿಕವಾಗಿ ನೀಡಬಹುದೆಂದು ತಿಳಿಸಿ ಈ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದ್ದು, ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯದ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಲು ಅನುಕೂಲವಾಗುವಂತೆ ರೇಷ್ಮೆ ಇಲಾಖೆಯ ಖಾಲಿ ಕಟ್ಟಡಗಳನ್ನು ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯಕ್ಕೆ ನೀಡಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 10 ರೇಯೋವಿ 2010, ಬೆಂಗಳೂರು, ದಿನಾಂಕ: 22ನೇ ಮೇ, 2010**

ರೇಷ್ಮೆ ಇಲಾಖೆಯ ಧಾರವಾಡದ ರಾಯಾಪುರ ಸಂಕೀರ್ಣದಲ್ಲಿರುವ ಒಂದು ಮೌಂಟಿಂಗ್ ಹಾಲ್ (ಸುಮಾರು 800 ಚದರಡಿ), ರೇಷ್ಮೆ ಬಿತ್ತನೆಕೋಠಿಯ ಮೊದಲನೆ ಮಹಡಿಯ ಪೂರ್ಣ ಕಟ್ಟಡ (ಸುಮಾರು 10000 ಚದರಡಿ) ಹಾಗೂ ಬಿತ್ತನೆ ಕೋಠಿಯ ವಸತಿ ಗೃಹ (ಸುಮಾರು 1500 ಚದರಡಿ) ಕಟ್ಟಡಗಳನ್ನು ಹುಬ್ಬಳ್ಳಿಯ ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯಕ್ಕೆ ಅದರ ಸ್ವಂತ ಕಟ್ಟಡಗಳು ನಿರ್ಮಾಣವಾಗುವವರೆಗೆ 3 ವರ್ಷಗಳ ಅವಧಿಗೆ ಲೀಸ್/ಬಾಡಿಗೆ ಆಧಾರದ ಮೇಲೆ ಕಾನೂನುಬದ್ಧ ಷರತ್ತುಗಳನ್ನು ವಿಧಿಸಿ, ತಾತ್ಕಾಲಿಕವಾಗಿ ನೀಡಲು ಸರ್ಕಾರದ ಮಂಜೂರಾತಿ ನಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಭಾರತಿ ಆರ್. ನಾಯಕ್)**

ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 1335

## ಒಳಾಡಳಿತ ಸಚಿವಾಲಯ

**ವಿಷಯ** : ಹೊಸದಾಗಿ ಸೃಜನೆಯಾದ ರಾಮನಗರ ಜಿಲ್ಲೆಗೆ ಅವಿಭಾಜಿತ ಬೆಂಗಳೂರು ಜಿಲ್ಲೆಯಲ್ಲಿರುವ ಪೊಲೀಸ್ ಉಪ ವಿಭಾಗ/ವೃತ್ತಗಳ ಸ್ಥಳ ವ್ಯಾಪ್ತಿ ಆಧಾರದ ಮೇಲೆ ರಾಮನಗರ ಜಿಲ್ಲಾ ಆಡಳಿತಕ್ಕೆ ಒಳಪಡಿಸುವ ಕುರಿತು.

**ಓದಲಾಗಿದೆ** : ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ : ಆರ್.ಎಲ್.ಎಸ್. (6) 12[ಎ]/2007–08, ದಿನಾಂಕ 08–01–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಹೊಸದಾಗಿ ಸೃಜನೆಯಾದ ರಾಮನಗರ ಜಿಲ್ಲೆಗೆ ಅವಿಭಾಜಿತ ಬೆಂಗಳೂರು ಜಿಲ್ಲೆಯಲ್ಲಿರುವ ಪೊಲೀಸ್ ಉಪ ವಿಭಾಗ/ವೃತ್ತ/ಠಾಣೆ/ಹೊರಠಾಣೆಗಳನ್ನು ಸ್ಥಳ ವ್ಯಾಪ್ತಿ ಆಧಾರದ ಮೇಲೆ ರಾಮನಗರ ಜಿಲ್ಲಾ ಆಡಳಿತಕ್ಕೆ ಒಳಪಡಿಸುವ ಕುರಿತು ಅಧಿಸೂಚನೆ ಹೊರಡಿಸುವಂತೆ ಕೋರಿರುತ್ತಾರೆ.

Cr. P. C. 1973 [1974] ಕೇಂದ್ರ ಅಧಿನಿಯಮ [2]ರ ಕಲಂ 2ರ ಖಂಡ [ಎಸ್] ಅಡಿ ಕೇವಲ ಪೊಲೀಸ್ ಠಾಣೆಗಳ ಸರಹದ್ದನ್ನು ನಿಗಧಿಪಡಿಸುವ ಅಧಿಸೂಚನೆ ಹೊರಡಿಸಬಹುದು. ಆದ್ದರಿಂದ ಹೊಸದಾಗಿ ಸೃಜನೆಯಾದ ರಾಮನಗರ ಜಿಲ್ಲೆಗೆ ಅವಿಭಾಜಿತ ಬೆಂಗಳೂರು ಜಿಲ್ಲೆಯಲ್ಲಿರುವ ಪೊಲೀಸ್ ಉಪ ವಿಭಾಗ/ವೃತ್ತಗಳ ಸ್ಥಳ ವ್ಯಾಪ್ತಿ ಆಧಾರದ ಮೇಲೆ ರಾಮನಗರ ಜಿಲ್ಲಾ ಆಡಳಿತಕ್ಕೆ ಒಳಪಡಿಸುವ ಕುರಿತು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 26 ಪಿಓಪಿ 2010, ಬೆಂಗಳೂರು, ದಿನಾಂಕ: 14ನೇ ಮೇ, 2010**

ಹೊಸದಾಗಿ ಸೃಜನೆಯಾದ ರಾಮನಗರ ಜಿಲ್ಲೆಗೆ ಅವಿಭಾಜಿತ, ಬೆಂಗಳೂರು ಜಿಲ್ಲೆಯಲ್ಲಿರುವ ಪೊಲೀಸ್ ಉಪ ವಿಭಾಗ/ವೃತ್ತಗಳನ್ನು ಸ್ಥಳ ವ್ಯಾಪ್ತಿ ಆಧಾರದ ಮೇಲೆ ರಾಮನಗರ ಜಿಲ್ಲಾ ಆಡಳಿತಕ್ಕೆ ಈ ಕೆಳಕಂಡಂತೆ ಒಳಪಡಿಸಿ ಸರ್ಕಾರದ ಮಂಜೂರಾತಿಯನ್ನು ನೀಡಿದೆ.

| *Name of the District/ Police Sub-Division/Circle* | *Name of the Police Station in which the areas and places specified in column (3) shall be included* | *Name of the areas and places* | *Name of the Police Station from the jurisdiction of which the areas and places specified in column (3) shall be excluded* |
|---|---|---|---|
| 1 | 2 | 3 | 4 |
| *Bangalore District :*<br>**I Bangalore Sub-division**<br>i. Hosakote Circle | 1. Hosakote P.S.<br>(a) Avalahalli O.P. | Hosakote P.S. areas | Retained in Bangalore District |
| ii. Nandagudi Circle | 2. Nandagudi P.S. | Nandagudi P.S. areas | Retained in Bangalore District |
| | 3. Sulibele P.S. | Sulibele P.S.areas | Retained in Bangalore District |
| iii. T. S. Halli Circle | 4. T. S. Halli P.S. | .T. S. Halli P.S. areas | Retained in Bangalore District |
| | 5. Anugondanahalli P. S. | Anugondanahalli P. S. areas | Retained in Bangalore District |
| iv. Anekal Circle | 6. Anekal P.S. | Anekal P.S. areas | Retained in Bangalore District |
| | 7. Bannerghatta P.S. | Bannerghatta P.S. areas | Retained in Bangalore District |
| v. Attibele Circle | 8. Attibele P.S. | Attibele P.S. areas | Retained in Bangalore District |
| | 9. Hebbagodi P.S. | Hebbagodi P.S. areas | Retained in Bangalore District |
| | 10. Sarjapura P.S. | Sarjapura P.S. areas | Retained in Bangalore District |
| **II.Doddaballapura Sub Division**<br>vi. Doddaballapura Circle | 11. D.B. Pura Town P.S. | D.B. Pura Town P.S. areas | Retained in Bangalore District |

| | | | |
|---|---|---|---|
| | 12. D.B. Pura Rural P.S.<br>(b) S. S. Ghati O.P. | D.B. Pura Rural P.S. area | Retained in Bangalore District |
| | 13. Doddabelavan-gala P.S.<br>(c) Sasalu O.P.<br>14. Hosahalli P.S. | Doddabelavangala P.S. areas<br><br>Hosahalli P.S.areas | Retained in Bangalore District<br>Retained in Bangalore District |
| | 15. RajanukunteP.S. | Rajanukunte P.S. areas | Retained in Bangalore District |
| | 16. Vijayapura P.S. | Vijayapura P.S. areas | Retained in Bangalore District |
| **III. Nelamangala Sub- Division**<br>viii. Nelamangala Circle | 17. Vishwanatha-pura P.S. | Vishwanathapura P.S. areas | Retained in Bangalore District |
| | 18. Channaraya-patna P.S.<br>19. Nelamangala P.S. | Channarayapatna P.S. areas<br>Nelamangala P.S. areas | Retained in Bangalore District<br>Retained in Bangalore District |
| | 20. Dobbespet P.S.<br>(d) Shivagange O.P. | Dobbespet P.S. areas | Retained in Bangalore District |
| | 21. Thyamagondlu P.S. | Thyamagondlu P.S.areas | Retained in Bangalore District |
| **IV. Ramanagara Sub- Division** | 22. Ramanagara (T) P.S. | Ramanagara Town P.S. | Excluded from Bangalore District |
| ix. Ramanagara (T) Circle | 23. Ijoor P.S. | Ijoor P.S. P.S. areas | Excluded from Bangalore District |
| | 24. Ramanagara Tr P.S. | Ramanagara Tr P.S. areas | Excluded from Bangalore District |
| x. Ramanagara Rural Circle | 25. Ramanagara (R) P.S. | Ramanagara Rural P.S. areas | Excluded from Bangalore District |
| | 26. Bidadi P.S. | Bidadi P.S areas | Excluded from Bangalore District |
| xi. Harohalli Circle | 27. Harohalli P.S. | Harohalli P.S. areas | Excluded from Bangalore District |
| | 28. Thalaghattapura P.S | Thalaghattapura P.S areas | Excluded from Bangalore District |
| xii. Magadi Circle | 29. Magadi P.S. | Magadi P.S. areas | Excluded from Bangalore District |
| | 30. Kuduru P.S (c) Solur O.P. | Kuduru P.S areas | Excluded from Bangalore District |
| | 31. ThavarekereP.S. (f) Byadarahalli O.P. | Thavarekere P.S. areas | Excluded from Bangalore District |

| | | | |
|---|---|---|---|
| **V. Channapatna Sub- Division** xiii. Channapatna (T) Circle | 32. Channapatna Town P.S. | Channapatna Town P.S. areas | Excluded from Bangalore District |
| | 33. Channapatna East P.S. | Channapatna East P.S. areas | Excluded from Bangalore District |
| xiv. Channapatna (R) Circle | 34. Channapatna Rural P.S. | Channapatna Rural P.S. areas | Excluded from Bangalore District |
| | 35. M. K. Doddi P.S. | M. K. Doddi P.S. areas | Excluded from Bangalore District |
| | 36. Akkur P.S. | Akkur P.S. areas | Excluded from Bangalore District |
| xv. Kanakapura Circle | 37. Kanakapura Town P.S. | Kanakapura Town P.S. areas | Excluded from Bangalore District |
| | 38. Kanakapura Rural P.S. | Kanakapura Rural P.S. areas | Excluded from Bangalore District |
| | 39. Sathnur P.S. | Sathnur P.S. areas | Excluded from Bangalore District |
| | 40. Kodihalli P.S. | Kodihalli P.S. areas | Excluded from Bangalore District |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಬಿ. ಎಂ. ಲಕ್ಷ್ಮೀನಾರಾಯಣ)**
ಸರ್ಕಾರದ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

ಪಿ.ಆರ್. 1336

## ಒಳಾಡಳಿತ ಸಚಿವಾಲಯ

**ವಿಷಯ** : ವೀರಪ್ಪನ್ ಮತ್ತು ಆತನ ತಂಡದವರನ್ನು ಸಂಹಾರ ಮಾಡಿದ ಕಾರ್ಯಾಚರಣೆ ಪಡೆಯಲ್ಲಿ ತೊಡಗಿದ್ದ ಪೊಲೀಸ್ ಅಧಿಕಾರಿ/ಸಿಬ್ಬಂದಿ ವರ್ಗದವರಿಗೆ ನಿವೇಶನದ ಬದಲು ನಗದು ಹಣ ನೀಡುವ ಬಗ್ಗೆ ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 33 ಪಿಓಪಿ 2005, ದಿನಾಂಕ : 08–07–2005ಕ್ಕೆ ಮಾರ್ಪಾಟು ಮಾಡುವ ಕುರಿತು.

**ಓದಲಾಗಿದೆ** :

1. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 33 ಪಿಓಪಿ 2005, ದಿನಾಂಕ : 08–07–2005
2. ಕಡತದ ಸಂಖ್ಯೆ : ಹೆಚ್‌ಡಿ 163 ಪಿಓಪಿ 2006
3. ದಿನಾಂಕ : 06–04–2010ರಂದು ಮಾನ್ಯ ಗೃಹ ಹಾಗೂ ಮುಜರಾಯಿ ಸಚಿವರು ಹಾಗೂ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು, ಸಂಸದೀಯ ಮತ್ತು ಶಾಸನ ರಚನೆ ಮತ್ತು ನಗರಾಭಿವೃದ್ಧಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.
4. ಕಾರ್ಯದರ್ಶಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರ ಪತ್ರದ ಸಂಖ್ಯೆ : ಬೆಂ.ಅಪ್ರಾ/ಅಸ/53/2010, ದಿನಾಂಕ 28–04–2010.

**ಪ್ರಸ್ತಾವನೆ :**

ಮೇಲೆ [1]ರಲ್ಲಿ ಓದಲಾದ ಆದೇಶದಲ್ಲಿ ನರಹಂತಕ ವೀರಪ್ಪನ್ ಮತ್ತು ಆತನ ತಂಡದವರನ್ನು ಸಂಹಾರ ಮಾಡಿದ ಕಾರ್ಯಾಚರಣೆಯಲ್ಲಿ ತೊಡಗಿದ್ದ 754 ಪೊಲೀಸ್ ಅಧಿಕಾರಿ/ಸಿಬ್ಬಂದಿಗಳಿಗೆ ನಗದು ಬಹುಮಾನ ಮತ್ತು ವೇತನ ಬಡ್ತಿ ಹಾಗೂ ಅವರುಗಳ ಸ್ವಗ್ರಾಮದ ಜಿಲ್ಲಾ ಕೇಂದ್ರಗಳಲ್ಲಿ ಅಥವಾ ಅವರು ಇಚ್ಛಿಸುವ ಜಿಲ್ಲೆಯ ಇತರ ಸ್ಥಳಗಳಲ್ಲಿ ಇನ್ಸ್‌ಪೆಕ್ಟರ್ ವೃಂದಕ್ಕಿಂತ ಕೆಳಮಟ್ಟದ ಅಧಿಕಾರಿಗಳಿಗೆ 30''x40'' ಅಡಿ ಮತ್ತು ಡಿ.ವೈ.ಎಸ್.ಪಿ. ವೃಂದದ ಮೇಲ್ಪಟ್ಟ ಅಧಿಕಾರಿಗಳಿಗೆ 40''x60'' ಅಡಿ ಅಳತೆಯ ಉಚಿತ ನಿವೇಶನ ಹಂಚಲು ಮಂಜೂರಾತಿ ನೀಡಲಾಗಿದೆ.

ಅದರಂತೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಇದನ್ನು ಒಳಾಡಳಿತ ಇಲಾಖೆ ಪರಿಶೀಲಿಸಿ ಮೇಲೆ [2]ರಲ್ಲಿ ಓದಲಾದ ಕಡತದಲ್ಲಿ ನಿವೇಶನಗಳನ್ನು ಹಂಚಲು ಗುರುತಿಸುವ ಸಲುವಾಗಿ ನಗರಾಭಿವೃದ್ಧಿ ಇಲಾಖೆಗೆ ದಿನಾಂಕ 07–08–2006ರಂದು ಕಳುಹಿಸಿಕೊಡಲಾಗಿತ್ತು.

ಈ ಮಧ್ಯೆ ಫಲಾನುಭವಿಗಳ ಪೈಕಿ ಅನೇಕರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಹಲವಾರು ರಿಟ್ ಅರ್ಜಿಗಳನ್ನು ದಾಖಲು ಮಾಡಿ ದಿನಾಂಕ 08–07–2005ರ ಪ್ರಕಾರ ನಿವೇಶನ ಹಂಚಲು ಸರ್ಕಾರಕ್ಕೆ ನಿರ್ದೇಶನ ನೀಡುವಂತೆ ಕೋರಿದ್ದರು. ಈ ಎಲ್ಲಾ ಪ್ರಕರಣಗಳ ಮೇಲೆ ಕರ್ನಾಟಕ ಉಚ್ಚ ನ್ಯಾಯಾಲಯವು ಕೆಳಗಿನಂತೆ ಸಾಮಾನ್ಯ ತೀರ್ಪು ನೀಡಿರುತ್ತದೆ.

> "Petitions stand disposed of directing the respondents to consider the said representations for allotment of site, having regard to the fact that the petitioners xxx xxx were in STF at the relevant point of time. Compliance in six months"

ಸದರಿ ತೀರ್ಪಿನ ಬಗ್ಗೆ ಸರ್ಕಾರಿ ವಕೀಲರು ಒಳಾಡಳಿತ ಇಲಾಖೆಯ ಕಾನೂನು ಕೋಶದ ಮುಖ್ಯಸ್ಥರಿಗೆ ಬರೆದ ಪತ್ರಗಳಲ್ಲಿ ಈ ಪ್ರಕರಣಗಳು ಮೇಲ್ಮನವಿ ಸಲ್ಲಿಸಲು ಅರ್ಹವಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ. ಈ ವಿಷಯಗಳನ್ನು ಅನಧಿಕೃತ ಟಿಪ್ಪಣಿಗಳ ಸಂಖ್ಯೆ : ಹೆಚ್‌ಡಿ 207 ಪಿಓಪಿ 2009[ಭಾ], ದಿನಾಂಕ 01–09–2009, 06–10–2009, 25–11–09 ರಲ್ಲಿ ನಗರಾಭಿವೃದ್ಧಿ ಇಲಾಖೆಯ ಗಮನಕ್ಕೆ ತರಲಾಗಿದೆ. ಅರ್ಜಿದಾರರ ಪೈಕಿ ರಿಟ್ ಅರ್ಜಿ ಸಂಖ್ಯೆ : 21384/2009 ಮತ್ತು ರಿಟ್ ಅರ್ಜಿ ಸಂಖ್ಯೆ : 21479/2009ರನ್ನು ದಾಖಲಿಸಿದ ಶ್ರೀ ಬಿ. ಕೆ. ವೆಂಕಪ್ಪ ರೈ ಮತ್ತು ಶ್ರೀ ಎನ್. ಜಗನ್ನಾಥನ್ ಎಂಬುವವರು ನಿಂದನಾ ಅರ್ಜಿ ಸಂಖ್ಯೆ : 365/2010 ಮತ್ತು 414/2010 ಪ್ರಯುಕ್ತ ಅವರುಗಳಿಗೆ 30x40 ಅಡಿ ಅಳತೆಯ ನಿವೇಶನಗಳನ್ನು ಮೂಡಾ ಮತ್ತು ಬಿಡಿಎ ವತಿಯಿಂದ ಹಂಚಿಕೆ ಮಾಡಲಾಗಿದೆ. ಮುಂದುವರೆದು ರಿಟ್ ಅರ್ಜಿ ಸಂಖ್ಯೆ : 22213/2009, ರಿಟ್ ಅರ್ಜಿ ಸಂಖ್ಯೆ : 199957/2008 ಮತ್ತು ರಿಟ್ ಅರ್ಜಿ ಸಂಖ್ಯೆ : 23998/2009ರನ್ನು ದಾಖಲಿಸಿದ ಶ್ರೀ ನಿಂಗಪ್ಪ ಮತ್ತು ಶ್ರೀ ಬಿ. ಕೆ. ಭಾಸ್ಕರ್ ರೈ ಮತ್ತು ಶ್ರೀ ಡಿ. ಆರ್. ಜಯಸ್ವಾಮಿ ಇವರುಗಳು ನಿಂದನಾ ಅರ್ಜಿ ಸಂಖ್ಯೆ : 507/2010, 546/2010 ಮತ್ತು 508/2010ರ ಪ್ರಯುಕ್ತ 30x40 ಅಡಿ ಅಳತೆಯ ನಿವೇಶನಗಳನ್ನು ಬಿಡಿಎ ಮತ್ತು ಮೂಡಾ ವತಿಯಿಂದ ಹಂಚಿಕೆ ಮಾಡಲಾಗಿದೆ ಆದರೆ ನಗರಾಭಿವೃದ್ಧಿ ಇಲಾಖೆಯ ಇತರೆ ಫಲಾನುಭವಿಗಳಿಗೆ ಅವರು ಇಚ್ಚಿಸಿರುವ ಅನೇಕ ಸ್ಥಳಗಳಲ್ಲಿ ನಿವೇಶನಗಳ ಲಭ್ಯತೆಯು ಅವಶ್ಯಕತೆಗಿಂತ ಬಹಳ ಕಡಿಮೆ ಇವೆ ಹಾಗೂ ಹಲವೆಡೆ ನಿವೇಶನಗಳು ಲಭ್ಯವಿಲ್ಲ ಎಂದು ತಿಳಿಸಿರುತ್ತಾರೆ. ಹಾಗಾಗಿ ಕರ್ನಾಟಕ ಗೃಹ ಮಂಡಳಿ ವತಿಯಿಂದ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳಿಗೆ ನಿವೇಶನಗಳನ್ನು ಹಂಚುವ ಸಾಧ್ಯತೆಯ ಬಗ್ಗೆಯೂ ಪರಿಶೀಲಿಸಲಾಗಿ ಅಲ್ಲಿನ ವಸ್ತುಸ್ಥಿತಿಯೂ ಭಿನ್ನವಾಗಿರುವುದಿಲ್ಲ.

ಮೇಲಿನ ವಸ್ತುಸ್ಥಿತಿಯ ಹಿನ್ನೆಲೆಯಲ್ಲಿ ಮಾನ್ಯ ಮುಜರಾಯಿ ಮತ್ತು ಗೃಹ ಸಚಿವರು ಹಾಗೂ ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು, ಸಂಸದೀಯ ಮತ್ತು ಶಾಸನ ರಚನೆ ಮತ್ತು ನಗರಾಭಿವೃದ್ಧಿ ಸಚಿವರುಗಳ ಅಧ್ಯಕ್ಷತೆಯಲ್ಲಿ ಈ ವಿಷಯವನ್ನು ಇತ್ಯರ್ಥಪಡಿಸುವ ಸಲುವಾಗಿ ದಿನಾಂಕ 06–04–2010ರಂದು ಒಂದು ಸಭೆಯನ್ನು ನಡೆಸಲಾಯಿತು. ಸಭೆಯಲ್ಲಿ ಈ ಕುರಿತು ಗಹನ ಚರ್ಚೆಯಾದ ನಂತರ, ನಿವೇಶನಗಳನ್ನು ಹಂಚುವ ಬಗ್ಗೆ ಇರುವ ತೊಂದರೆಗಳನ್ನು ಗಮನದಲ್ಲಿಟ್ಟುಕೊಂಡು, ಫಲಾನುಭವಿಗಳು ಇಚ್ಚಿಸಿದ ಸ್ಥಳಗಳಲ್ಲಿ ನಿವೇಶನ ಹಂಚಿಕೆ ಮಾಡುವ ಬದಲು ನಿವೇಶನ ಮೌಲ್ಯಕ್ಕೆ ಸಮನಾದ ನಗದು ಮೊತ್ತವನ್ನು ಫಲಾನುಭವಿಗಳಿಗೆ ನೀಡಲು ಅನುಕೂಲವಾಗುವಂತೆ ದಿನಾಂಕ 08–07–2005ರ ಸರ್ಕಾರಿ ಆದೇಶವನ್ನು ಮಾರ್ಪಡಿಸಲು ತೀರ್ಮಾನಿಸಲಾಯಿತು. ಆದರೆ, ಒಂದು ವೇಳೆ ನಿವೇಶನದ ಬದಲು ನಗದು ಮೊತ್ತ ನೀಡಿದಲ್ಲಿ ವಿವಿಧ ಜಿಲ್ಲೆಗಳಲ್ಲಿ ನಿವೇಶನದ ಬೆಲೆ ವಿಭಿನ್ನವಾಗಿರುವುದರಿಂದ, ಎಲ್ಲರಿಗೂ ಸಮಾನವಾಗಿ ನಗದು ಮೊತ್ತವನ್ನು ನೀಡಲು ಸಾಧ್ಯವಾಗದೇ ತಾರತಮ್ಯ ಉಂಟಾಗುವುದರಿಂದ ಈ ಸಮಸ್ಯೆಯನ್ನು ಬಗೆಹರಿಸಲು ನಿವೇಶನ ಹಂಚಿಕೆಯಾಗದಿರುವ ಫಲಾನುಭವಿಗಳಿಗೆ ಅವರುಗಳು ಅರ್ಹರಿರುವ ನಿವೇಶನದ ನಗದನ್ನು ಏಕರೂಪದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ 30x40 ಅಡಿ ಮತ್ತು 40x60 ಅಡಿ ನಿವೇಶನಗಳಿಗೆ ಅನ್ವಯಿಸುವ ಮೌಲ್ಯವನ್ನು ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತದೆ.

ಮೇಲೆ [4]ರಲ್ಲಿ ಓದಲಾದ ಪತ್ರದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು 30x40 ಅಡಿ ಮತ್ತು 40x60 ಅಡಿ ಅಳತೆಯ ನಿವೇಶನಗಳೆರಡಕ್ಕೂ ಈಗಿನ ನಿವೇಶನ ಹಂಚಿಕೆ ಪ್ರತಿ ಚದರ ಅಡಿಗೆ ರೂ. 210/–ಗಳಾಗುತ್ತವೆ ಎಂದು ತಿಳಿಸಿರುತ್ತಾರೆ. ಹಂಚಿಕೆಯಾಗಬೇಕಾಗಿರುವ 30x40 ಅಡಿ ಅಳತೆಯ ನಿವೇಶನಗಳ ಸಂಖ್ಯೆ ಒಟ್ಟು 735 (ನಿವೇಶನ ಹಂಚಿಕೆಯಾಗಿರುವ ಒಟ್ಟು ಐದು ಪೊಲೀಸ್ ಸಿಬ್ಬಂದಿಯನ್ನು ಹೊರತುಪಡಿಸಿ) ಹಾಗೂ ಹಂಚಿಕೆಯಾಗಬೇಕಾಗಿರುವ 40x60 ಅಡಿ ಅಳತೆಗಳ ನಿವೇಶನಗಳ ಸಂಖ್ಯೆ 14 ಆಗಿರುತ್ತದೆ. ಇದಕ್ಕೆ ಒಟ್ಟು ಸುಮಾರು ರೂ. 20.00 ಕೋಟಿಗಳ ಅಂದಾಜು ವೆಚ್ಚ ತಗಲುತ್ತದೆ.

ಮೇಲಿನ ಎಲ್ಲಾ ಅಂಶಗಳನ್ನು ವಿವರವಾಗಿ ಸರ್ಕಾರ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 92 ಪಿಓಪಿ 2010, ಬೆಂಗಳೂರು, ದಿನಾಂಕ: 17ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ 08–07–2005ರ ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 33 ಪಿಓಪಿ 2005ರನ್ನು ಭಾಗಶಃ ಮಾರ್ಪಡಿಸಿ ಅದರಲ್ಲಿನ 754 ಪೊಲೀಸ್ ಅಧಿಕಾರಿ/ಸಿಬ್ಬಂದಿಗಳ ಸ್ವಗ್ರಾಮದ

(Home Town) ಜಿಲ್ಲಾ ಕೇಂದ್ರಗಳಲ್ಲಿ ಅಥವಾ ಅವರು ಇಚ್ಚಿಸಿರುವ ಜಿಲ್ಲೆಯ ಇತರ ಸ್ಥಳದಲ್ಲಿ ನಿವೇಶನ ಹಂಚಿಕೆ ಮಾಡುವ ಬದಲು ನಿವೇಶನ ಹಂಚಿಕೆಯಾಗದಿರುವ ಪೊಲೀಸ್ ಅಧಿಕಾರಿ/ಸಿಬ್ಬಂದಿ ಅವರುಗಳು ಅರ್ಹರಿರುವ ನಿವೇಶನದ ನಗದನ್ನು ಏಕರೂಪದಲ್ಲಿ 30x40 ಅಡಿ ಮತ್ತು 40x60 ಅಡಿ ನಿವೇಶನಗಳಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ದರದಂತೆ ಪ್ರತಿ ಚದರ ಅಡಿಗೆ ರೂ. 210/–ಗಳ ಲೆಕ್ಕದಲ್ಲಿ ಅನ್ವಯಿಸುವ ಮೊತ್ತವನ್ನು ಮಂಜೂರು ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–109–1–01 ಜಿಲ್ಲಾ ಪೊಲೀಸ್–015–ಪೂರಕ ವೆಚ್ಚ ಇದರ ಅಡಿಯಲ್ಲಿ ಒದಗಿಸಿದ ರೂ. 20.00 ಕೋಟಿ ಹೆಚ್ಚುವರಿ ಅನುದಾನದಿಂದ ಭರಿಸತಕ್ಕದ್ದು.

ಈ ಕೆಳಕಂಡ ಪೊಲೀಸ್ ಸಿಬ್ಬಂದಿಗಳು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ ನಿಂದನಾ ಅರ್ಜಿ ಸಂಖ್ಯೆ : 365/2010, 414/2010, 507/2010, 546/2010 ಮತ್ತು 508/2010 ರನ್ವಯ ಸರ್ಕಾರ ನಿವೇಶನ ಮಂಜೂರು ಮಾಡಿದ್ದು, ಅವರುಗಳು ಈ ಆದೇಶದನ್ವಯ ನಗದು ಮೊತ್ತಕ್ಕೆ ಅರ್ಹರಿರುವುದಿಲ್ಲ.

ಶ್ರೀಯುತರು :

1. ವೆಂಕಪ್ಪ ರೈ ಬಿ. ಕೆ., ನಿವೃತ್ತ ಆರ್.ಎಸ್.ಐ.,<br>s/o ಕಿಟ್ಟಣ್ಣ ರೈ,<br>ನಂ. 684/1, ಸೀತಾ ನಿಲಯ,<br>4ನೇ ಕ್ರಾಸ್, ಕುವೆಂಪು ರೋಡ್,<br>ಎರಗಾನಹಳ್ಳಿ, ಹೊಸ ಬಡಾವಣೆ,<br>ಮೈಸೂರು.
2. ಎನ್. ಜಗನ್ನಾಥನ್, ನಿವೃತ್ತ ಆರ್.ಎಸ್.ಐ., 4ನೇ ಪಡೆ, ಕೆ.ಎಸ್.ಆರ್.ಪಿ.,<br>s/o ಲೇ. ಎಂ. ನಟೇಶನ್,<br>ನಂ. 5/4, 3ನೇ ಕ್ರಾಸ್, 3ನೇ ಮೇನ್ ರೋಡ್,<br>ಆಯ್ಯಪ್ಪ ಟೆಂಪಲ್ ಬ್ಲಾಕ್, ವನ್ನಾರಪೇಟೆ,<br>ಬೆಂಗಳೂರು–47.
3. ನಿಂಗಪ್ಪ ಪೊಲೀಸ್ ಪೇದೆ–491<br>s/o ಚನ್ನಪ್ಪ,<br>9ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು,<br>ನಂ. 64, ಕುವೆಂಪು ಸಂಕೀರ್ಣ, 6ನೇ ಬ್ಲಾಕ್,<br>ಕೆ.ಎಸ್.ಆರ್.ಪಿ., ಪೊಲೀಸ್ ವಸತಿಗೃಹ, ಕೋರಮಂಗಲ, ಬೆಂಗಳೂರು–34.
4. ಬಿ. ಕೆ. ಭಾಸ್ಕರ್ ರೈ, ನಿವೃತ್ತ ಆರ್.ಎಸ್.ಐ.,<br>s/o ಕೊರಗಪ್ಪ ರೈ,<br>4ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು,<br>ಆರ್/ಜ, ನಂ. 221, ಅನಂತ ನಿಲಯ,<br>2ಎ ಮೇನ್, ವಿನಾಯಕ ಬಡಾವಣೆ,<br>ನಾಗರಬಾವಿ 2ನೇ ಹಂತ,<br>ಬೆಂಗಳೂರು–72.
5. ಡಿ. ಆರ್. ಜಯಸ್ವಾಮ, ಹೆಚ್. ಸಿ. 116, ಮೈಸೂರು ಜಿಲ್ಲೆ,<br>s/o ರಾಮಾರಾಧ್ಯ ಎ. ಚನ್ನವೀರಾಧ್ಯ,<br>ನಂ. 186, 3ನೇ ಕ್ರಾಸ್, ಕಾವೇರಿ ಮುಖ್ಯ ರಸ್ತೆ, ರಾಘವೇಂದ್ರ ನಗರ,<br>ಮೈಸೂರು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 128 ವೆಚ್ಚ–11/2010, ದಿನಾಂಕ : 05–05–2010 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಬಿ. ಎಂ. ಲಕ್ಷ್ಮೀನಾರಾಯಣ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1337 ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

## ಶಿಕ್ಷಣ ಸಚಿವಾಲಯ

ವಿಷಯ : ರಾಜ್ಯದಲ್ಲಿ ಶಾಲಾ ಮಕ್ಕಳಿಗೆ ಉಚಿತ ಪಠ್ಯಪುಸ್ತಕ ವಿತರಣೆಯನ್ನು ಸುಸೂತ್ರವಾಗಿ ನೋಡಿಕೊಳ್ಳಲು ಸಮಿತಿ ರಚಿಸುವ ಬಗ್ಗೆ.

ಓದಲಾಗಿದೆ : ದಿನಾಂಕ : 18-05-2010ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ, ಬೆಂಗಳೂರು ಇವರ ಆಧ್ಯಕ್ಷತೆಯಲ್ಲಿ 2010-11ನೇ ಸಾಲಿಗೆ ಪಠ್ಯಪುಸ್ತಕ ವಿತರಣೆ ಕುರಿತು ನಡೆದ ಸಭೆಯಲ್ಲಿ ಕೈಗೊಂಡ ನಿರ್ಣಯ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದ ಎಲ್ಲಾ ಸರ್ಕಾರಿ ಹಾಗೂ ಅನುದಾನಿತ ಶಾಲೆಗಳಲ್ಲಿ ಒಂದರಿಂದ ಎಂಟನೇ ತರಗತಿಗಳ ಓದುತ್ತಿರುವ ವಿದ್ಯಾರ್ಥಿಗಳಿಗೆ ಉಚಿತ ಪಠ್ಯಪುಸ್ತಕಗಳನ್ನು ವಿತರಿಸಲಾಗುತ್ತಿರುವುದು ಸರಿಯಷ್ಟೆ.

ಮೇಲೆ ಓದಲಾದ ದಿನಾಂಕ 18-05-2010ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ 2010-11ನೇ ಸಾಲಿಗೆ ಪಠ್ಯಪುಸ್ತಕ ವಿತರಣೆ ಕುರಿತು ನಡೆದ ಸಭೆಯಲ್ಲಿ ಕರ್ನಾಟಕ ರಾಜ್ಯದ ಎಲ್ಲಾ ಸರ್ಕಾರಿ ಹಾಗೂ ಅನುದಾನಿತ ಶಾಲೆಗಳಲ್ಲಿ ಒಂದರಿಂದ ಎಂಟನೇ ತರಗತಿಗಳ ಓದುತ್ತಿರುವ ವಿದ್ಯಾರ್ಥಿಗಳಿಗೆ ಉಚಿತ ಪಠ್ಯಪುಸ್ತಕಗಳನ್ನು ವಿತರಿಸುತ್ತಿರುವ ಹಾಗೂ 9 ಮತ್ತು 10ನೇ ತರಗತಿಗಳ ಅನುದಾನಿತ ಶಾಲಾ ವಿದ್ಯಾರ್ಥಿಗಳಿಗೆ ಹಾಗೂ 1 ರಿಂದ 10ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಅನುದಾನರಹಿತ ಶಾಲಾ ವಿದ್ಯಾರ್ಥಿಗಳಿಗೆ ಮಾರಾಟ ರೂಪದಲ್ಲಿ ಪಠ್ಯಪುಸ್ತಕಗಳನ್ನು ವಿತರಿಸಲಾಗುತ್ತಿದೆ. ಪಠ್ಯಪುಸ್ತಕಗಳನ್ನು ಸಮರ್ಪಕವಾಗಿ ವಿತರಿಸಲು ಒಂದು ಸಮಿತಿಯನ್ನು ರಚಿಸುವ ಬಗ್ಗೆ ಚರ್ಚೆ ನಡೆಸಿದ ನಂತರ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 148 ಯೋಯೋಕ 2010, ಬೆಂಗಳೂರು, ದಿನಾಂಕ: 20-05-2010**

**[ಇಡಿ : 62 : ಸ್ಕೀಮರ(ಯುನಿಕ್) 2010, ದಿನಾಂಕ 20-05-2010**

2010-11ನೇ ಸಾಲಿಗೆ ಕರ್ನಾಟಕ ರಾಜ್ಯದ ಎಲ್ಲಾ ಸರ್ಕಾರಿ ಶಾಲೆಗಳಲ್ಲಿ ಒಂದರಿಂದ ಹತ್ತನೇ ತರಗತಿಗಳಲ್ಲಿ ಹಾಗೂ ಅನುದಾನಿತ ಶಾಲೆಗಳಲ್ಲಿ ಒಂದರಿಂದ ಎಂಟನೇ ತರಗತಿಗಳಲ್ಲಿ ಓದುತ್ತಿರುವ ವಿದ್ಯಾರ್ಥಿಗಳಿಗೆ ಉಚಿತ ಪಠ್ಯಪುಸ್ತಕಗಳನ್ನು ಸಕಾಲಿಕವಾಗಿ ಮತ್ತು ಸಮರ್ಪಕವಾಗಿ ವಿತರಿಸಲು ಹಾಗೂ ಮಾರಾಟ, ಪಠ್ಯಪುಸ್ತಕಗಳ ವಿತರಣೆ ಕುರಿತಂತೆ ದೂರುಗಳ ಬಗ್ಗೆ ಪರಿಶೀಲಿಸಲು ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡಂತೆ ಮೇಲ್ವಿಚಾರಣಾ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಶ್ರೀ ಬಿ. ವಿ. ಕುಲಕರ್ಣಿ, ನಿರ್ದೇಶಕರು, ಸರ್ವ ಶಿಕ್ಷಾ ಅಭಿಯಾನ, ಬೆಂಗಳೂರು | ಅಧ್ಯಕ್ಷರು |
| 2. | ಶ್ರೀ ವೈ. ಟಿ. ಗುರುಮೂರ್ತಿ, ಜಂಟಿ ನಿರ್ದೇಶಕರು, ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು | ಸದಸ್ಯರು ಗುಲ್ಬರ್ಗಾ ವಿಭಾಗದ ಉಸ್ತುವಾರಿ |
| 3. | ಶ್ರೀ ದೇವಪ್ರಕಾಶ್, ಜಂಟಿ ನಿರ್ದೇಶಕರು, ಮಧ್ಯಾಹ್ನ ಉಪಹಾರ ಯೋಜನೆ, ಬೆಂಗಳೂರು | ಸದಸ್ಯರು [ಬೆಂಗಳೂರು ವಿಭಾಗದ ಉಸ್ತುವಾರಿ] |
| 4. | ಶ್ರೀ ಅಬ್ದುಲ್ ಅಲೀಮ್, ಜಂಟಿ ನಿರ್ದೇಶಕರು, ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು | ಸದಸ್ಯರು [ಮೈಸೂರು ವಿಭಾಗದ ಉಸ್ತುವಾರಿ] |
| 5. | ಶ್ರೀ ಎಂ. ಎಸ್. ಪಾಟೀಲ್, ಜಂಟಿ ನಿರ್ದೇಶಕರು, ಡಿ.ಎಸ್.ಇ.ಆರ್.ಟಿ., ಬೆಂಗಳೂರು | ಸದಸ್ಯರು [ಬೆಳಗಾವಿ ವಿಭಾಗದ ಉಸ್ತುವಾರಿ] |

4) ಸಮಿತಿಯು ನಿರ್ವಹಿಸಬೇಕಾದ ಕಾರ್ಯಬಾರಗಳು ಈ ಕೆಳಕಂಡಂತಿವೆ :

- ➢ ಆಯಾ ವಿಭಾಗದ ಉಸ್ತುವಾರಿ ವಹಿಸಿದ ಅಧಿಕಾರಿಗಳು ತಮ್ಮ ಜಿಲ್ಲೆಗಳಿಗೆ ಬೇಕಾಗುವ ಪಠ್ಯಪುಸ್ತಕಗಳ ಶೀರ್ಷಿಕೆವಾರು ಬೇಡಿಕೆ, ಸ್ವೀಕೃತಿ ಮತ್ತು ವಿತರಣೆಯಾಗುವ ಮಾಹಿತಿಯನ್ನು ಅಧ್ಯಕ್ಷರ ನೇತೃತ್ವದಲ್ಲಿ ಸಭೆ ನಡೆಸಿ ನಮೂನೆ ಸಿದ್ಧಪಡಿಸಿ ಮಾಹಿತಿಯನ್ನು ಕಲೆ ಹಾಕುವುದು.
- ➢ ಉಪನಿರ್ದೇಶಕರ ಕಛೇರಿಗೆ ಪಠ್ಯ ಪುಸ್ತಕಗಳನ್ನು ತ್ವರಿತವಾಗಿ ವಿತರಿಸುವಲ್ಲಿ ಕ್ರಮ ವಹಿಸುವುದು.
- ➢ ಈಗಾಗಲೇ ಉಪ ನಿರ್ದೇಶಕರ ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಲಭ್ಯವಿರುವ ಪಠ್ಯಪುಸ್ತಕಗಳ ದಾಸ್ತಾನುಗಳ ವರದಿಯನ್ನು ತೆಗೆದುಕೊಂಡು ಅವುಗಳನ್ನು ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳುವ ಅಥವಾ ಬೇರೆ ವಿಭಾಗಗಳಿಗೆ ವರ್ಗಾಯಿಸುವಲ್ಲಿ ಕ್ರಮ ವಹಿಸುವುದು.
- ➢ ಪ್ರತಿ ದಿನ ಸದರಿ ವಿಷಯದ ಪೂರ್ಣ ಮಾಹಿತಿಯನ್ನು ಸಂಬಂಧಪಟ್ಟವರಿಂದ ಸಂಗ್ರಹಿಸಿ ಅಧ್ಯಕ್ಷರಿಗೆ ವರದಿಯನ್ನು ನೀಡುವುದು.

- ಅಧ್ಯಕ್ಷರು ಪ್ರತಿ ದಿನದ ಹಿಮ್ಮಾಹಿತಿಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸುವುದು.
- ಮಾರಾಟ ಪಠ್ಯಪುಸ್ತಕಗಳಿಗೆ ಸಂಬಂಧಿಸಿದಂತೆ ಶಿಕ್ಷಣ ಇಲಾಖೆಯಿಂದ ಅಗತ್ಯವೆನಿಸಿದಲ್ಲಿ ಜಿಲ್ಲೆ ಮತ್ತು ತಾಲ್ಲೂಕುಗಳಲ್ಲಿ ಮಾರಾಟ ಅಂಗಡಿಗಳನ್ನು ತೆರೆಯುವುದು.
- ಯಾವುದೇ ಕಾರಣಕ್ಕೂ ಪಠ್ಯಪುಸ್ತಕಗಳ ವಿತರಣೆ ವಿಳಂಬವಾಗದಂತೆ ನೋಡಿಕೊಳ್ಳುವುದು.

5. ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರುಗಳಿಗೆ ಪ್ರಯಾಣ ಭತ್ಯೆ, ದಿನಭತ್ಯೆ ಹಾಗೂ ಇನ್ನಿತರೆ ಭತ್ಯೆಗಳನ್ನು ಸಂಘದ ನಿಯಮಾವಳಿಯಂತೆ ಕರ್ನಾಟಕ ಪಠ್ಯಪುಸ್ತಕ ಸಂಘದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**(ಐ. ಎಫ್. ಮಾಗಿ)**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 1366

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ
### ತಿದ್ದುಪಡಿ

ಸಂಖ್ಯೆ : ಸಿಐ 151 ಎಸ್‌ಜಿಎಫ್ 2008 (ಭಾ-1), ಬೆಂಗಳೂರು, ದಿನಾಂಕ 27-05-2010

ಸರ್ಕಾರಿ ಆದೇಶ ಸಂಖ್ಯೆ ಸಿಐ 151 ಎಸ್‌ಜಿಎಫ್ 2008 (ಭಾ-1), ದಿನಾಂಕ 30-03-2010ರಲ್ಲಿನ ಆದೇಶ ಭಾಗದ 2ನೇ ಪ್ಯಾರಾದಲ್ಲಿರುವ 4ನೇ ಸಾಲಿನಲ್ಲಿ ಮರುಹೊಂದಾಣಿಕೆ ನಂತರ **"ಮಾಡಲಾಗಿದ್ದು"** ಎಂಬುದನ್ನು ತೆಗೆದು ಹಾಕಿ **"ಮಾಡಿ ವೆಚ್ಚ ಹಾಕಿ ಲೆಕ್ಕ ಶೀರ್ಷಿಕೆ 0040-00-110-1-04 sales tax ಗೆ ಜಮೆ ತೋರಿಸಿ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**(ಪಿ. ಆನಂದ್‌ಕುಮಾರ್)**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 1367

## ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ

ವಿಷಯ : ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ನೀಡುವ ಯೋಜನೆ.

ಓದಲಾಗಿದೆ : 1) 2010-11ನೇ ಆಯವ್ಯಯದಲ್ಲಿ ಘೋಷಿಸಿರುವ ಹೊಸ ಯೋಜನೆ.
2) ದಿನಾಂಕ: 17-05-2010ರಂದು ಜರುಗಿದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ 2010-11ನೇ ಸಾಲಿನ ಆಯವ್ಯಯ ಘೋಷಣೆಯಲ್ಲಿ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಪರೀಕ್ಷಾ ಪೂರ್ವ ತರಬೇತಿ ನೀಡಲು ಲೆಕ್ಕ ಶೀರ್ಷಿಕೆ 2225-03-800-0-16 ರಡಿಯಲ್ಲಿ ರೂ.50.00 ಲಕ್ಷಗಳನ್ನು ಒದಗಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ದಿನಾಂಕ: 17-05-2010ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ಅಧಿಕಾರಯುಕ್ತ ಸಮಿತಿಯ ಸಭೆ ಜರುಗಿದ್ದು, ಅದರಲ್ಲಿ ಈ ಹೊಸ ಯೋಜನೆಯ ಮಾರ್ಗಸೂಚಿಗಳ ಬಗ್ಗೆ ಚರ್ಚಿಸಿ ಯೋಜನಾ ಇಲಾಖೆಯು ಸೂಚಿಸಿದಂತೆ ಕಾರ್ಯಯೋಜನೆಯನ್ನು ಮಾಹಿತಿ ಆಧಾರದ ಮೇಲೆ ನಿರ್ವಹಿಸುವಂತೆ ಮತ್ತು ಮೂರು ವರ್ಷಗಳ ನಂತರ ಯೋಜನೆಯ ಮೌಲ್ಯ ನಿರ್ಧರಿಸುವ ಬಗ್ಗೆ ಕ್ರಮ ಕೈಗೊಳ್ಳುವಂತೆ ಸೂಚಿಸಿ ಸದರಿ ಯೋಜನೆಗೆ ಅನುಮೋದನೆ ನೀಡಿರುತ್ತದೆ.

ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಸಂಕಇ 68 ಡಬ್ಲ್ಯೂಎಫ್‌ಡಬ್ಲ್ಯೂ 2010, ಬೆಂಗಳೂರು, ದಿನಾಂಕ: 26-05-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010-11ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ನೀಡಲು ಅನುಬಂಧದಲ್ಲಿ ನಿಗಧಿಪಡಿಸಿರುವ ಷರತ್ತಿಗೊಳಪಟ್ಟು ಹಾಗೂ ಯೋಜನಾ ಇಲಾಖೆಯು ಸೂಚಿಸಿದಂತೆ ಕಾರ್ಯಯೋಜನೆಯನ್ನು ಮಾಹಿತಿ ಆಧಾರದ ಮೇಲೆ ನಿರ್ವಹಿಸುವಂತೆ ಮತ್ತು ಮೂರು ವರ್ಷಗಳ ನಂತರ ಯೋಜನೆಯ ಮೌಲ್ಯ ನಿರ್ಧರಿಸುವ ಬಗ್ಗೆ ಕ್ರಮ ಕೈಗೊಳ್ಳುವಂತೆ ಸೂಚಿಸಿ ಸರ್ಕಾರ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 12 ಐಎಂಎಂ 2010 ದಿನಾಂಕ : 27–04–2010 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 280 ವೆಚ್ಚ–3/10, ದಿನಾಂಕ: 13–05–2010ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
(ಎಲ್ ಎಸ್ ವಾಸನ್)
ಸರ್ಕಾರದ ಅಧೀನ ಕಾರ್ಯದರ್ಶಿ
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

ಅನುಬಂಧ

ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಪರೀಕ್ಷಾ ಪೂರ್ವ ತರಬೇತಿಗೆ ಮಾರ್ಗಸೂಚಿಗಳು

ಕೇಂದ್ರ ಮತ್ತು ಕರ್ನಾಟಕ ಲೋಕಸೇವಾ ಆಯೋಗಗಳು ಹಾಗೂ ಇತರೆ ನೇಮಕಾತಿ ಪ್ರಾಧಿಕಾರಗಳು ನಡೆಸುವ ಪರೀಕ್ಷೆಗಳನ್ನು ಗಮನದಲ್ಲಿಟ್ಟುಕೊಂಡು ರಾಜ್ಯ ಸರ್ಕಾರವು ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಪರೀಕ್ಷಾ ಪೂರ್ವ ತರಬೇತಿಯನ್ನು ಸರ್ಕಾರದ ವಿವಿಧ ಇಲಾಖೆಗಳ ಪರೀಕ್ಷಾ ತರಬೇತಿ ಕೇಂದ್ರಗಳು ಹಾಗೂ ಪ್ರತಿಷ್ಠಿತ ಖಾಸಗಿ ಸಂಸ್ಥೆಗಳ ಮೂಲಕ ತರಬೇತಿ ನೀಡಲು ಉದ್ದೇಶಿಸಿದೆ. ಅದರಂತೆ ಈ ಕೆಳಕಂಡ ಮಾರ್ಗಸೂಚಿಗಳನ್ನು ರಚಿಸಿದೆ.

I ಉದ್ದೇಶಗಳು

ಗುಣಾತ್ಮಕ ಬೋಧನೆಯನ್ನು ಕೊಡುವುದು ಈ ಯೋಜನೆ ಉದ್ದೇಶವಾಗಿದೆ.

1) ಕೇಂದ್ರ ಲೋಕಸೇವಾ ಆಯೋಗದವರು ನಡೆಸುವ ಗ್ರೂಪ್ 'ಎ' ಮತ್ತು 'ಬಿ' ಪರೀಕ್ಷೆಗಳು
2) ಕರ್ನಾಟಕ ಲೋಕಸೇವಾ ಆಯೋಗದವರು ನಡೆಸುವ ಗ್ರೂಪ್ 'ಎ' ಮತ್ತು 'ಬಿ' ಪರೀಕ್ಷೆಗಳು
3) ಬ್ಯಾಂಕ್‌ಗಳು, ಇನ್‌ಸುರೆನ್ಸ್ ಕಂಪನಿಗಳು ಸಾರ್ವಜನಿಕ/ರಾಜ್ಯಸರ್ಕಾರದ ಸ್ವಾಯತ್ತ ಸಂಸ್ಥೆಗಳು ಹಾಗೂ ಇತರೆ ಸಂಸ್ಥೆಗಳು, ನಡೆಸುವ ಅಧಿಕಾರಿಗಳ ದರ್ಜೆಯ ಪರೀಕ್ಷೆಗಳು

II ಅನುಷ್ಠಾನದ ಸಂಸ್ಥೆಗಳು

1) ರಾಜ್ಯ ಸರ್ಕಾರದಿಂದ ನಡೆಸಲಾಗುವ ಪರೀಕ್ಷಾ ಪೂರ್ವ ತರಬೇತಿ ಕೇಂದ್ರ.
2) ರಾಜ್ಯ ಮತ್ತು ರಾಜ್ಯದ ಹೊರಗೆ ಗುರುತಿಸಲ್ಪಟ್ಟ ಖಾಸಗಿ ಸಂಸ್ಥೆಗಳಿಗೆ ನಿಯೋಜಿಸುವುದು.

III ಅನುದಾನದ ಹಂಚಿಕೆ

1) ಕರ್ನಾಟಕ ಸರ್ಕಾರವು ಈ ಕಾರ್ಯಕ್ರಮಕ್ಕೆ ಅನುದಾನವನ್ನು ಒದಗಿಸುವುದು.
2) ಸಂಸ್ಥೆಗಳ ಶುಲ್ಕಗಳು, ಅಭ್ಯರ್ಥಿಗಳ ಸ್ಟೈಫೆಂಡ್ ಹಾಗೂ ಇತರೆ ಸಂಬಂಧಿಸಿದ ಖರ್ಚುಗಳನ್ನು ಸರ್ಕಾರವು ಭರಿಸುವುದು.
3) ಕೇಂದ್ರ ಸರ್ಕಾರದ ಅಲ್ಪಸಂಖ್ಯಾತರ ಸಚಿವಾಲಯದಿಂದಲೂ ಈ ಕಾರ್ಯಕ್ರಮ ಅನುಷ್ಠಾನಕ್ಕೆ ಅನುದಾನವನ್ನು ಪಡೆದುಕೊಳ್ಳಲಾಗುವುದು.

**IV ಅಭ್ಯರ್ಥಿಗಳ ಅರ್ಹತೆ**

1) ಅಭ್ಯರ್ಥಿಗಳು ಸಂಬಂಧಿಸಿದ ಪ್ರಾಧಿಕಾರದಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸುವುದು.
2) ವಾರ್ಷಿಕ ರೂ. 2.00 ಲಕ್ಷ ಕ್ಕಿಂತ ಕಡಿಮೆ ಆದಾಯವುಳ್ಳ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಮಾತ್ರ ಈ ಯೋಜನೆಯಡಿಯಲ್ಲಿ ಸೌಲಭ್ಯ ಪಡೆಯಬಹುದು. (ಅಭ್ಯರ್ಥಿ ಹಾಗೂ ಪೋಷಕರ ಆದಾಯವನ್ನು ಗಣನೆಗೆ ತೆಗೆದುಕೊಳ್ಳುವುದು)
3) ಅಭ್ಯರ್ಥಿಯು ಯು.ಪಿ.ಎಸ್.ಸಿ, ಕೆ.ಪಿ.ಎಸ್.ಸಿ/ಪಿ.ಎಸ್.ಯು. ಮಾರ್ಗಸೂಚಿಯಂತೆ ಯಾವುದೇ ಒಂದು ಪದವಿಯನ್ನು ಹೊಂದಿರಬೇಕು.
4) ಇತರೆ ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದವರು ನಿಗಧಿಪಡಿಸಿದ ವಿದ್ಯಾರ್ಹತೆಯನ್ನು ಹೊಂದಿರಬೇಕು.
5) ಉದ್ಯೋಗದ ಪ್ರಕಟಣೆಯಂತೆ ಅಭ್ಯರ್ಥಿಯ ವಯೋಮಿತಿಯು ಕನಿಷ್ಠ 21 ವರ್ಷಗಳಿದ್ದು, ಗರಿಷ್ಠ ವಯೋಮಿತಿಯು ಪ್ರಾಧಿಕಾರ ನಿಗಧಿಪಡಿಸಿದಂತೆ ಇರಬೇಕು.

6) ಯೋಜನೆಯಡಿಯಲ್ಲಿ ಅಭ್ಯರ್ಥಿಯು ಈ ಕೆಳಕಂಡಂತೆ ಸೌಲಭ್ಯಗಳನ್ನು ಪಡೆದುಕೊಳ್ಳಬಹುದು.

ಅ) ಸ್ಪರ್ಧಾತ್ಮಕ ಪರೀಕ್ಷೆಯು ಎರಡು ಹಂತಗಳಲ್ಲಿ ಅಂದರೆ ಪ್ರಿಲಿಮಿನರಿ ಮತ್ತು ಮುಖ್ಯ ಪರೀಕ್ಷೆ ನಡೆಯುವುದಿದ್ದಲ್ಲಿ ಅಭ್ಯರ್ಥಿಯು ಎರಡೂ ಪರೀಕ್ಷೆಗಳಿಗೂ ಬೋಧನೆಯನ್ನು ಪಡೆಯಬಹುದು. ಆದರೆ ಮುಖ್ಯ ಪರೀಕ್ಷೆಗೆ ತರಬೇತಿಯನ್ನು ಪಡೆಯಲು ಅಭ್ಯರ್ಥಿಯು ಮೂಲ ಪರೀಕ್ಷೆಯನ್ನು (Prelim) ಪಾಸು ಮಾಡಿರಬೇಕು ಹಾಗೂ ಮುಖ್ಯ ಪರೀಕ್ಷೆಗೆ (Main) ಅರ್ಜಿಯನ್ನು ಹಾಕಿರಬೇಕು ಅಥವಾ ಹಾಕುವವರಾಗಿರಬೇಕು.

ಆ) ಅಭ್ಯರ್ಥಿಯು ಯಾವುದೇ ಒಂದು ಸ್ಪರ್ಧಾತ್ಮಕ ಪರೀಕ್ಷೆಯನ್ನು ತೆಗೆದುಕೊಳ್ಳಲು ಹಲವಾರು ಅವಕಾಶಗಳಿದ್ದರೂ ಸದರಿ ಯೋಜನೆಯಡಿ ಕೇವಲ ಒಂದು ಬಾರಿ ಮಾತ್ರ ಸೌಲಭ್ಯವನ್ನು ಪಡೆಯಬಹುದು. ಉದಾಹರಣೆ: ಒಂದು ಬಾರಿ ಮೂಲ ಪರೀಕ್ಷೆ (Preliminary) ಮತ್ತು ಒಂದು ಬಾರಿ ಮುಖ್ಯ ಪರೀಕ್ಷೆ.

ಇ) ವೈಯಕ್ತಿಕ ಸಂದರ್ಶನದ ಅಭ್ಯರ್ಥಿಯು ಎಷ್ಟು ಬಾರಿ ಬೇಕಾದರೂ ಸದರಿ ಯೋಜನೆಯಡಿ ಸೌಲಭ್ಯವನ್ನು ಪಡೆಯಬಹುದು.

ಈ) ಅಭ್ಯರ್ಥಿಯು ಸದರಿ ಯೋಜನೆಯಡಿಯಲ್ಲಿ ಎರಡು ಬಾರಿಗಿಂತ ಹೆಚ್ಚಿಗೆ ಮೂಲ ಪರೀಕ್ಷೆ/ಮುಖ್ಯ ಪರೀಕ್ಷೆ (Prelim/main) ಸೌಲಭ್ಯವನ್ನು ಪಡೆದುಕೊಂಡಿರುವುದಿಲ್ಲ ಎಂದು ಪ್ರಮಾಣ ಪತ್ರವನ್ನು ಸಲ್ಲಿಸಬೇಕು.

ಉ) ಆಯ್ಕೆಗೊಂಡ ಅಭ್ಯರ್ಥಿಗಳು ಯಾವುದೇ ಒಂದು ಅನುಮೋದಿತ ತರಬೇತಿ ಸಂಸ್ಥೆಯನ್ನು ತಮ್ಮ ಇಚ್ಛಾನುಸಾರ ಸೇರಬಹುದು.

ಊ) ಆಯ್ಕೆಗೊಂಡ ಅಭ್ಯರ್ಥಿಯು ಎಲ್ಲಾ ತರಗತಿಗಳಿಗೆ ಕಡ್ಡಾಯವಾಗಿ ಹಾಜರಾಗುವುದು.ಅಭ್ಯರ್ಥಿಯು 15 ದಿನಗಳಿಗೆ ಮೇಲ್ಪಟ್ಟು ಸಕಾರಣವಿಲ್ಲದೇ ಗೈರು ಹಾಜರಾದಲ್ಲಿ ಉಚಿತ ಬೋಧನೆಯ ಸೌಲಭ್ಯವನ್ನು ರದ್ದುಗೊಳಿಸಲಾಗುವುದು.

ಋ) ಅನುಮೋದಿತ ತರಬೇತಿ ಸಂಸ್ಥೆಗಳೂ ಕೂಡ ಅಂತಹ ಅಭ್ಯರ್ಥಿಗಳ ಬಗ್ಗೆ ಇಲಾಖೆಗೆ ವರದಿ ಮಾಡುವುದು. ಅದರಂತೆ ಶುಲ್ಕ/ ಇತ್ಯಾದಿ ಸೌಲಭ್ಯಗಳನ್ನು ಸದರಿ ಅಭ್ಯರ್ಥಿಗೆ ಕಡಿತಗೊಳಿಸುವುದು

ಋ) ಅಭ್ಯರ್ಥಿಯು ಸ್ವತ: ಮುಖ್ಯ ಪರೀಕ್ಷೆಯನ್ನು ಪಾಸು ಮಾಡಿ ವೈಯಕ್ತಿಕ ಸಂದರ್ಶನದ (Personal Interview) ತರಬೇತಿಯನ್ನು ಬಯಸಿದ್ದಲ್ಲಿ ಅಂತಹ ಅಭ್ಯರ್ಥಿಗೂ ಸದರಿ ಯೋಜನೆಯಡಿ ಸೌಲಭ್ಯವನ್ನು ಕೊಡುವುದು.

## V ಅಭ್ಯರ್ಥಿಗಳ ಆಯ್ಕೆ

1) ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಪತ್ರಿಕಾ ಪ್ರಕಟಣೆಗಳು/ವೆಬ್‌ಸೈಟ್ ಇತ್ಯಾದಿಗಳ ಮೂಲಕ ಆಹ್ವಾನಿಸಲಾಗುವುದು.
2) ಮೂಲ ಪರೀಕ್ಷೆಯ ಬೋಧನೆಗೆ/ಒಂದನೆ ಹಂತದ ಪರೀಕ್ಷೆಗೆ (Preliminary Examination) ಅಭ್ಯರ್ಥಿಗಳು ಲಿಖಿತ ಪರೀಕ್ಷೆಯಲ್ಲಿ ಪಡೆದುಕೊಂಡ ಅಂಕಗಳ ಅರ್ಹತೆ ಮೇಲೆ ಆಯ್ಕೆ ಪಟ್ಟಿಯನ್ನು ಸಿದ್ದಪಡಿಸಲಾಗುವುದು. ಅಭ್ಯರ್ಥಿಗಳ ನಿಯೋಜನೆ/ಪ್ರವೇಶವು ಅನುದಾನದ ಲಭ್ಯತೆಯನ್ನು ಆಧರಿಸಿದೆ. (ಅರ್ಹತೆಯ ಪಟ್ಟಿಯನ್ನು ಪ್ರಕಟಿಸುವುದು.)
3) ಲಿಖಿತ ಪರೀಕ್ಷೆಯು ಇಂಗ್ಲೀಷ್, ಸಾಮಾನ್ಯ ಜ್ಞಾನ ಮತ್ತು ಅಂಕಗಣಿತದ ಸಾಮರ್ಥ ಇತ್ಯಾದಿಯನ್ನು ಒಳಗೊಂಡಿರುತ್ತದೆ.
4) ಅರ್ಹ ಅಭ್ಯರ್ಥಿಗಳನ್ನು ವಿವಿಧ ತರಬೇತಿ ಸಂಸ್ಥೆಗಳಿಗೆ ಅಂಕಗಳ ಅರ್ಹತೆ ಮತ್ತು ಅಭ್ಯರ್ಥಿಗಳ ಇಚ್ಛಾನುಸಾರ ನಿಯೋಜಿಸಲಾಗುವುದು.
5) ಮೂಲಪರೀಕ್ಷೆಯಲ್ಲಿ (Prelim) ಅರ್ಹರಾದ ಎಲ್ಲಾ ಅಭ್ಯರ್ಥಿಗಳನ್ನು ಮುಖ್ಯ ಪರೀಕ್ಷೆಯ ಬೋಧನೆಗೆ ಅನುದಾನದ ಲಭ್ಯತೆ ಆಧರಿಸಿ ಸೇರಿಸಿಕೊಳ್ಳಲಾಗುವುದು.

## VI ಅಭ್ಯರ್ಥಿಗಳ ಸಂಖ್ಯೆ:

ತರಬೇತಿಗೆ ನಿಯೋಜಿಸುವ ಅಭ್ಯರ್ಥಿಗಳ ಸಂಖ್ಯೆಯು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಅನುದಾನದ ಲಭ್ಯತೆಯನ್ನು ಅವಲಂಭಿಸಿರುತ್ತದೆ.

## VII ಶಿಷ್ಯವೇತನ (ಸ್ಟೈಫೆಂಡ್)

1) ಮೂಲ ಪರೀಕ್ಷೆಯ ತರಬೇತಿಗೆ (Prelim Exam) ಹೊರ ರಾಜ್ಯಕ್ಕೆ ಹೋಗುವ ಅಭ್ಯರ್ಥಿಗಳಿಗೆ ಮಾಸಿಕ ತಲಾ ರೂ. 5000/– ಹಾಗೂ ಸ್ಥಳೀಯ ಅಭ್ಯರ್ಥಿಗಳಿಗೆ ಮಾಸಿಕ ತಲಾ 3000/–ಕ್ಕೆ ಮೀರದಂತೆ ಶಿಷ್ಯವೇತನ (ಸ್ಟೈಫೆಂಡ್) ನೀಡಲಾಗುವುದು.

2) ಪ್ರತಿಷ್ಠಿತ ಸಂಸ್ಥೆಗಳಿಗೆ ನಿಯೋಜಿಸುವ ಅಭ್ಯರ್ಥಿಗಳ ಮಾಸಿಕ ಸ್ಟೈಫೆಂಡ್‌ನ್ನು ತರಬೇತಿ ಸಂಸ್ಥೆಯು ಇರುವ ಸ್ಥಳ ಹಾಗೂ ಅಲ್ಲಿಯ ಮೂಲಭೂತ ಅಗತ್ಯ ಖರ್ಚುಗಳ ಆಧಾರದ ಮೇಲೆ ಸದರಿ ಯೋಜನೆಯಡಿ ನಿರ್ಧರಿಸಲಾಗುವುದು.
3) ಅಭ್ಯರ್ಥಿಗಳ ಮಾಸಿಕ ಸ್ಟೈಫೆಂಡ್ ಅನ್ನು ಇಲಾಖೆಯಿಂದ ನೇರವಾಗಿ ಅಭ್ಯರ್ಥಿಗಳಿಗೆ ಚೆಕ್‌ಗಳ ಮೂಲಕ ತರಬೇತಿ ಸಂಸ್ಥೆಗಳಿಂದ ಪಡೆದ ಹಾಜರಾತಿಯಂತೆ ಸೂಕ್ತ ಸ್ವೀಕೃತಿಯೊಂದಿಗೆ ಪಾವತಿಸಲಾಗುವುದು. ಒಂದು ವೇಳೆ ತರಬೇತಿ ಸಂಸ್ಥೆಗಳು, ಊಟದ ವಸತಿ ಸೌಲಭ್ಯವನ್ನು ಒದಗಿಸಿದ್ದಲ್ಲಿ ನೇರವಾಗಿ ಸಂಸ್ಥೆಗಳಿಗೆ ಹಣವನ್ನು ಪಾವತಿಸಲಾಗುವುದು.
4) ಆಯ್ಕೆಗೊಂಡ ಅಭ್ಯರ್ಥಿಗಳು ತಮ್ಮ ವಾಸಸ್ಥಳದಿಂದ ತರಬೇತಿ ಕೇಂದ್ರ ಹಾಗೂ ತರಬೇತಿ ಕೇಂದ್ರದಿಂದ ವಾಸಸ್ಥಳಕ್ಕೆ ಹೋಗಿಬರಲು 2ನೇ ಶ್ರೇಣಿ ರೈಲು/ಬಸ್ಸು ಪ್ರಯಾಣ ದರ ಹಾಗೂ ಪ್ರಯಾಣ ಭತ್ಯೆಯನ್ನು ನಿಗಧಿ ಪಡಿಸಿದಂತೆ ಪಡೆಯಲು ಅರ್ಹರು. ಆದರೆ ವೈಯಕ್ತಿಕ ಸಂದರ್ಶನಕ್ಕೆ (Personal Interview) ಹಾಜರಾಗುವ ಅಭ್ಯರ್ಥಿಗಳು ಪ್ರತಿ ಸಂದರ್ಶನದ ಸಂದರ್ಭದಲ್ಲೂ ಈ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ.
5) ವೈಯಕ್ತಿಕ ಸಂದರ್ಶನಕ್ಕೆ ಹಾಜರಾಗುವ ಅಭ್ಯರ್ಥಿಗಳಿಗೆ ಡಿ.ಪಿ.ಎ.ಆರ್ ಅನುಮತಿಯೊಂದಿಗೆ ಸಾಧ್ಯವಾದಷ್ಟು ಸರ್ಕಾರಿ ವಸತಿ ಗೃಹಗಳಲ್ಲಿ ವಸತಿ ಸೌಲಭ್ಯವನ್ನು ಕಲ್ಪಿಸಿಕೊಡಲಾಗುವುದು.

**VIII ಸದರಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಈ ಕೆಳಕಂಡ ಸಮಿತಿಯನ್ನು ರಚಿಸಲಾಗಿದೆ.**

1) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು,
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ – ಅಧ್ಯಕ್ಷರು
2) ಸರ್ಕಾರದ ಉಪ ಕಾರ್ಯದರ್ಶಿಗಳು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ – ಸದಸ್ಯರು
3) ನಿರ್ದೇಶಕರು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ – ಸದಸ್ಯ ಕಾರ್ಯದರ್ಶಿ

**IX ಸಮಿತಿಯ ಕಾರ್ಯಗಳು :**

1) ಸಮಿತಿಯು ನಿಯಮಾನುಸಾರ ಅಭ್ಯರ್ಥಿಗಳನ್ನು ಅರ್ಹತೆ ಆಧಾರ ಮೇಲೆ ಆಯ್ಕೆ ಮಾಡುವುದು
2) ಸಮಿತಿಯು ಸರ್ಕಾರಕ್ಕೆ ಪ್ರತಿಷ್ಠಿತ ತರಬೇತಿ ಸಂಸ್ಥೆಗಳು, ಅವುಗಳ ತರಬೇತಿ ಶುಲ್ಕ ಇತ್ಯಾದಿ ಹಾಗೂ ಅಭ್ಯರ್ಥಿಗಳ ಸ್ಟೈಫೆಂಡ್ ಮತ್ತು ಟಿ.ಎ. ಇತ್ಯಾದಿಗಳ ಬಗ್ಗೆ ಶಿಫಾರಸ್ಸು ಮಾಡುವುದು. ಸಮಿತಿಯು ಬೋಧನಾ ಅಂಶಗಳ ಕುರಿತಂತೆ ಸಂಬಂಧಪಟ್ಟ ಬೋಧನಾ ಸಂಸ್ಥೆಗಳೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವ ಅಧಿಕಾರ ಹೊಂದಿರುತ್ತದೆ. (ದಂಡನೆಯ ನಿಬಂಧನೆ ಸೇರಿದಂತೆ)
3) ಸಮಿತಿಯ ಸದರಿ ಯೋಜನೆಯಡಿಯಲ್ಲಿ ನಡೆಯುವ ಪರೀಕ್ಷೆಯ ಬಗ್ಗೆ ಪೂರೈಕೆ ಮಾಡಬೇಕಾದ ಅಧ್ಯಯನದ ಸಾಮಗ್ರಿಗಳು ಹಾಗೂ ಇತರೆ ಅಂಶಗಳ ಬಗ್ಗೆ ನಿರ್ಧಾರವನ್ನು ತೆಗೆದುಕೊಳ್ಳುವ ಅಧಿಕಾರ ಹೊಂದಿದೆ.
4) ಸದರಿ ಯೋಜನೆಯ ಮೇಲ್ವಿಚಾರಣೆ ಮತ್ತು ಅನುಷ್ಠಾನ
5) ಸದರಿ ಯೋಜನೆಯ ಸಾಧನೆಯ ಬಗ್ಗೆ ವಾರ್ಷಿಕ ವರದಿ ಸಲ್ಲಿಸುವುದು,
6) ಸದರಿ ಯೋಜನೆಯಡಿಯಲ್ಲಿ ಅರ್ಹ ಅಭ್ಯರ್ಥಿಗಳಿಂದ ನಿಯಮಾನುಸಾರ ಅರ್ಜಿಗಳನ್ನು ಆಹ್ವಾನಿಸಲು ಸಮಿತಿಯು ಅರ್ಜಿ ನಮೂನೆ ಹಾಗೂ ಅದಕ್ಕೆ ಸಂಬಂಧಪಟ್ಟ ಲಗತ್ತುಗಳನ್ನು ನಿಗಧಿಪಡಿಸಬಹುದು.
7) ಸಮಿತಿಯು ಬೋಧನಾ ತರಬೇತಿಯ ಅಭ್ಯರ್ಥಿಗಳ ಆಯ್ಕೆಯ ಲಿಖಿತ ಪರೀಕ್ಷೆಯನ್ನು ಸರ್ಕಾರಿ ಸಂಸ್ಥೆಗಳ ಮೂಲಕ ಮಾಡಿಸಲು ಅಧಿಕಾರ ಹೊಂದಿರುತ್ತದೆ. (Screening test)

**X ಪ್ರತಿಷ್ಠಿತ ಖಾಸಗಿ ಸಂಸ್ಥೆಗಳ ಆಯ್ಕೆ ಮತ್ತು ಶುಲ್ಕದ ನಿರ್ಧರಣೆ**

1) ಸಮಿತಿಯು ಅಭ್ಯರ್ಥಿಗಳ ನಿಯೋಜನೆಗೆ ಪ್ರತಿಷ್ಠಿತ ಸಂಸ್ಥೆಗಳಿಂದ ಪ್ರಸ್ತಾವನೆಗಳನ್ನು ಕರೆಯುವುದು.
2) ಸಮಿತಿಯು ಪ್ರತಿಷ್ಠಿತ ಸಂಸ್ಥೆಗಳ ಅಭ್ಯರ್ಥಿಗಳ ಪಾಸಿನ ಪ್ರಮಾಣದ ಆಧಾರದ ಮೇಲೆ ಅಂತಹ ಪ್ರತಿಷ್ಠಿತ ಸಂಸ್ಥೆಗಳನ್ನು ಆಯ್ಕೆ ಮಾಡಲು ಅಧಿಕಾರ ಹೊಂದಿರುತ್ತದೆ. ತರಬೇತಿ ಸಂಸ್ಥೆಗಳ ವಿವಿಧ ಪರೀಕ್ಷೆಗಳ ಬೋಧನಾ ಅವಧಿ, ಬೋಧನಾ ಗುಣಮಟ್ಟ ಹಾಗೂ ಸಂಸ್ಥೆಯ ಉದ್ಯೋಗದ ಸಫಲತೆಯ ಆಧಾರ ಮೇಲೆ ಸಮಿತಿಯು ಶುಲ್ಕದ ನಿಗಧಿಗೆ ಶಿಫಾರಸ್ಸು ಮಾಡುವುದು.
3) ತರಬೇತಿಯ ಅವಧಿ, ಶುಲ್ಕ ಇತ್ಯಾದಿಯೊಂದಿಗೆ ತರಬೇತಿ ಸಂಸ್ಥೆಗಳನ್ನು ಪ್ರತಿ ವರ್ಷ ಅಥವಾ ನಿರ್ದಿಷ್ಟ ಅವಧಿಗೆ ಆಯ್ಕೆ ಮಾಡುವುದು.

4) ಭೋಧನಾ ಕೇಂದ್ರಗಳಿಗೆ ಶುಲ್ಕ ಇತ್ಯಾದಿಯನ್ನು ಚೆಕ್‌ಗಳ ಮೂಲಕ ಒಡಂಬಡಿಕೆಯಂತೆ ಕಂತುಗಳಲ್ಲಿ ಪಾವತಿಸಲಾಗುವುದು.

**XI ಸಾಮಾನ್ಯ ಅವಕಾಶಗಳು**

1) ತರಬೇತಿ ಸಂಸ್ಥೆಯು ತರಬೇತಿ ಅವಧಿಯಲ್ಲಿ ಪ್ರತಿ ಒಬ್ಬ ಅಭ್ಯರ್ಥಿಯ ಪೂರ್ಣ ದಾಖಲೆಗಳನ್ನು ನಿರ್ವಹಿಸತಕ್ಕದ್ದು.
2) ಇಲಾಖೆಯು ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳ ಪಟ್ಟಿ, ಮೂಲ ಪರೀಕ್ಷೆ/ಮುಖ್ಯ ಪರೀಕ್ಷೆಯನ್ನು (Preliminary/Main) ಪಾಸು ಮಾಡಿದ ಅಭ್ಯರ್ಥಿಗಳ ಪಟ್ಟಿ ಮತ್ತು ಆಯ್ಕೆಗೊಂಡ ಅಭ್ಯರ್ಥಿಗಳ ಪಟ್ಟಿಯನ್ನು ನಿರ್ವಹಿಸತಕ್ಕದ್ದು.
3) ಯು.ಪಿ.ಎಸ್.ಸಿ/ಕೆಪಿಎಸ್‌ಸಿ ಮತ್ತು ಇತರೆ ನೇಮಕಾತಿ ಸಂಸ್ಥೆಗಳ ಮೂಲ ಆಯ್ಕೆಗೊಂಡ ಅಭ್ಯರ್ಥಿಗಳ ಪಟ್ಟಿಯನ್ನು ದಿನಪತ್ರಿಕೆಗಳಲ್ಲಿ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸುವುದು ಹಾಗೂ ಆಯ್ಕೆಗೊಂಡ ಅಭ್ಯರ್ಥಿಗಳನ್ನು ಸೂಕ್ತ ರೀತಿಯಲ್ಲಿ ಸನ್ಮಾನಿಸುವುದರ ಮೂಲಕ ಇತರೆ ಅಭ್ಯರ್ಥಿಗಳಿಗೆ ಉತ್ತೇಜನ, ಪ್ರೋತ್ಸಾಹ ನೀಡುವುದು.

**(ಎಲ್ ಎಸ್ ವಾಸನ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ.

ಪಿ.ಅರ್. 1368

**ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ**

ವಿಷಯ : ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಬೋಧನಾ ಶುಲ್ಕ (ರೆಮಿಡಿಯಲ್ ಭಾಷಾ ಕೋಚಿಂಗ್) ನೀಡುವ ಯೋಜನೆ.

ಓದಲಾಗಿದೆ :
1) 2010–11ನೇ ಆಯವ್ಯಯದಲ್ಲಿ ಘೋಷಿಸಿರುವ ಹೊಸ ಯೋಜನೆ.
2) ದಿನಾಂಕ: 17–05–2010ರಂದು ಜರುಗಿದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ 2010–11ನೇ ಸಾಲಿನ ಆಯವ್ಯಯ ಘೋಷಣೆಯಲ್ಲಿ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಪರೀಕ್ಷಾ ಪೂರ್ವ ತರಬೇತಿ ನೀಡಲು ಲೆಕ್ಕ ಶೀರ್ಷಿಕೆ 2225–03–800–0–17 ರಡಿಯಲ್ಲಿ ರೂ.300.00 ಲಕ್ಷಗಳನ್ನು ಒದಗಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ದಿನಾಂಕ: 17–05–2010ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ಅಧಿಕಾರಯುಕ್ತಿ ಸಮಿತಿಯ ಸಭೆ ಜರುಗಿದ್ದು, ಅದರಲ್ಲಿ ಮೇಲ್ಕಂಡ ಹೊಸ ಯೋಜನೆಯ ಮಾರ್ಗಸೂಚಿಗಳ ಬಗ್ಗೆ ಚರ್ಚಿಸಿ ಯೋಜನಾ ಇಲಾಖೆಯು ಸೂಚಿಸಿದಂತೆ ಕರಾರುವಕ್ಕಾದ ಮೂಲ ಮಾಹಿತಿಯನ್ನು ಪಾಲಿಸಲು ಪರಿಣಾಮಕಾರಿ ನಿರ್ವಹಣಾ ಪದ್ಧತಿಯನ್ನು ಅಳವಡಿಸಿಕೊಳ್ಳಲು ಮತ್ತು ಮೂರು ವರ್ಷಗಳ ನಂತರ ಯೋಜನೆಯ ಮೌಲ್ಯ ನಿರ್ಧರಿಸುವ ಬಗ್ಗೆ ಕ್ರಮ ಕೈಗೊಳ್ಳುವಂತೆ ಸೂಚಿಸಿ ಸದರಿ ಯೋಜನೆಗೆ ಅನುಮೋದನೆ ನೀಡಿರುತ್ತದೆ.

ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಅಸಂಕಇ 124 ಎಂಡಿಎಸ್ 2010, ಬೆಂಗಳೂರು, ದಿನಾಂಕ: 26–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ 2010–11ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಬೋಧನಾ ಶುಲ್ಕ (ರೆಮಿಡಿಯಲ್ ಭಾಷಾ ಕೋಚಿಂಗ್) ನೀಡಲು ಅನುಬಂಧದಲ್ಲಿ ನಿಗಧಿಪಡಿಸಿರುವ ಷರತ್ತಿಗೊಳಪಟ್ಟು ಹಾಗೂ ಯೋಜನಾ ಇಲಾಖೆಯು ಸೂಚಿಸಿದಂತೆ ಕಾರ್ಯಯೋಜನೆಯನ್ನು ಮಾಹಿತಿ ಆಧಾರದ ಮೇಲೆ ನಿರ್ವಹಿಸುವಂತೆ ಮತ್ತು ಮೂರು ವರ್ಷಗಳ ನಂತರ ಯೋಜನೆಯ ಮೌಲ್ಯ ನಿರ್ಧರಿಸುವ ಬಗ್ಗೆ ಕ್ರಮ ಕೈಗೊಳ್ಳುವಂತೆ ಸೂಚಿಸಿ ಸರ್ಕಾರ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಲ್ ಎಸ್ ವಾಸನ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

ಅನುಬಂಧ

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಿದ್ಯಾರ್ಥಿಗಳಿಗೆ ಬೋಧನಾ ಶುಲ್ಕ (ರೆಮಿಡಿಯಲ್ ಭಾಷಾ ಕೋಚಿಂಗ್) ನೀಡಲು ಮಾರ್ಗಸೂಚಿಗಳು :

ಕರ್ನಾಟಕ ರಾಜ್ಯದಲ್ಲಿ 4651 ಉರ್ದು ಮಾಧ್ಯಮದ ಉನ್ನತ ಪ್ರಾಥಮಿಕ ಶಾಲೆಗಳು ಮತ್ತು ಪ್ರೌಢ ಶಾಲೆಗಳು ಇರುತ್ತದೆ. (ಸರ್ಕಾರಿ, ಅನುದಾನಿತ ಮತ್ತು ಅನುದಾನ ರಹಿತ) ಇವುಗಳಲ್ಲಿ 2009-10 ನೇ ಸಾಲಿನಲ್ಲಿ 7ನೇ ತರಗತಿಯಲ್ಲಿ ಅಭ್ಯಾಸ ಮಾಡುವ 52,966 ವಿದ್ಯಾರ್ಥಿಗಳು ಮತ್ತು 10ನೇ ತರಗತಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ 17,849 ವಿದ್ಯಾರ್ಥಿಗಳು ಇರುತ್ತಾರೆ. ಈ ವಿದ್ಯಾರ್ಥಿಗಳು ತಮ್ಮ ಪರೀಕ್ಷೆಯಲ್ಲಿ ಉತ್ತೀರ್ಣರಾದಲ್ಲಿ 2010-11 ನೇ ಸಾಲಿನಲ್ಲಿ 8 ಮತ್ತು ಪಿಯುಸಿ ತರಗತಿಗಳಿಗೆ ಸೇರಲಿದ್ದಾರೆ. ಈ ವಿದ್ಯಾರ್ಥಿಗಳು ಉರ್ದು ಮಾಧ್ಯಮದಲ್ಲಿ ಕಲಿಯುತ್ತಿರುವುದರಿಂದ ಇಂಗ್ಲೀಷ್ ಅಥವಾ ಕನ್ನಡ ಮಾಧ್ಯಮಕ್ಕೆ ಹೊಂದಿಕೊಳ್ಳುವುದು ಅವರುಗಳಿಗೆ ಕಷ್ಟದಾಯಕವಾಗಿರುತ್ತದೆ. ಸಾಮಾನ್ಯವಾಗಿ ಇಂತಹ ಮಾಧ್ಯಮಗಳ ಬದಲಾವಣೆಯಿಂದ ಮುಂದಿನ ದಿನಗಳಲ್ಲಿ ವಿದ್ಯಾರ್ಥಿಗಳು ಅಂಕಗಣಿತ, ಸಾಮಾನ್ಯ ವಿಜ್ಞಾನ, ಇಂಗ್ಲೀಷ್/ಕನ್ನಡ ಮಾಧ್ಯಮದಲ್ಲಿ ಅರ್ಥಮಾಡಿಕೊಳ್ಳಲು ವಿಫಲವಾಗಿ ಶಾಲೆಯನ್ನು ಬಿಡುವರು. ಈ ಹಂತದಲ್ಲಿ ಶಾಲೆ ಬಿಡುವ ಅಲ್ಪಸಂಖ್ಯಾತರ ವಿದ್ಯಾರ್ಥಿಗಳ ಸಂಖ್ಯೆ ಅತ್ಯಧಿಕವಾಗಿರುತ್ತದೆ.

ಈ ಸಮಸ್ಯೆಯಿಂದ ಹೊರ ಬರಲು ಪರಿಹಾರಿಕ ಬೋಧನೆಯ ಕಾರ್ಯಕ್ರಮವು ಅವಶ್ಯವಿರುತ್ತದೆ. ವಿದ್ಯಾರ್ಥಿಗಳು 6ನೇ ತರಗತಿ ಅಥವಾ 9ನೇ ತರಗತಿ ಪೂರ್ಣಗೊಳಿಸಿದ ನಂತರ. ಇಂಗ್ಲೀಷ್/ಕನ್ನಡ, ಗಣಿತ, ಸಾಮಾನ್ಯ ವಿಜ್ಞಾನ ವಿಷಯಗಳಲ್ಲಿ ಪರಿಹಾರಿಕ ಬೋಧನೆಗೆ ಪ್ರಸ್ತಾಪಿಸಿದೆ. ಬದಲಿತ ಮಾಧ್ಯಮದಲ್ಲಿ 7/10ನೇ ತರಗತಿಯ ನಂತರ ಅಭ್ಯಾಸಿಸಬೇಕಾಗಿರುತ್ತದೆ. ಅಂದರೆ 1 ವರ್ಷದ ಅವಧಿಯವರೆಗೆ ಪ್ರತಿ ವಿದ್ಯಾರ್ಥಿಗೆ ಅರೇಕಾಲಿಕವಾಗಿ ಇಂಗ್ಲೀಷ್/ಕನ್ನಡ ಮಾಧ್ಯಮದಲ್ಲಿ ಮುಂದಿನ ಮಾಧ್ಯಮ ಬದಲಾವಣೆವರೆಗೆ ಬೋಧಿಸಬೇಕಾಗುತ್ತದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಮಾರ್ಗಸೂಚಿಗಳನ್ನು ರೂಪಿಸಲಾಗಿದೆ.

1) ಉರ್ದು ಮಾಧ್ಯಮದಲ್ಲಿ 6/9 ನೇ ತರಗತಿಯನ್ನು ಅಭ್ಯಾಸ ಮಾಡಿದಂತಹ ವಿದ್ಯಾರ್ಥಿಗಳು ಮುಂದೆ 8ನೇ ತರಗತಿ/ಪಿಯುಸಿ ತರಗತಿಗೆ ಕನ್ನಡ/ಇಂಗ್ಲೀಷ್ ಮಾಧ್ಯಮದಲ್ಲಿ ಸೇರುವುದಿದ್ದಲ್ಲಿ ಅಂತವರಿಗೆ ಪರಿಹಾರಿಕ ಭೋಧನೆಯನ್ನು ನೀಡಲಾಗುವುದು.
2) ಪರಿಹಾರಿಕ ಭೋಧನೆಯನ್ನು ಗಣಿತ, ವಿಜ್ಞಾನ, ಇಂಗ್ಲೀಷ್, ಕನ್ನಡ ವಿಷಯಗಳಲ್ಲಿ ಇಂಗ್ಲೀಷ್/ಕನ್ನಡ (ವಿದ್ಯಾರ್ಥಿಗಳ ಇಚ್ಛಾನುಸಾರ) ಮಾಧ್ಯಮದಲ್ಲಿ ನೀಡಲಾಗುವುದು.
3) ಪರಿಹಾರಿಕ ಭೋಧನೆಯನ್ನು 7ನೇ ಮತ್ತು 10ನೇ ತರಗತಿ ವಿದ್ಯಾರ್ಥಿಗಳಿಗೆ ಬೇಸಿಗೆ ರಜೆಯಲ್ಲಿ 45 ದಿನಗಳವರೆಗೆ ಮತ್ತು ವಾರದ 2 ಕೊನೆಯ ದಿನಗಳಲ್ಲಿ ಅರ್ಧ (1/2) ದಿನದವರೆಗೆ ವರ್ಷ ಪೂರ್ತಿ ನೀಡಲಾಗುವುದು.
4) ಪ್ರಾರಂಭಿಕವಾಗಿ ಪ್ರತಿ ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆಯು 70ಕ್ಕೆ ಕಡಿಮೆ ಇದ್ದಲ್ಲಿ ಒಂದು ಕೇಂದ್ರವನ್ನು ತೆರೆಯಲಾಗುವುದು. (ಬಾಲಕರು/ಬಾಲಕಿಯರು). ಸಂಖ್ಯಾ ಬಲವು 70ಕ್ಕೆ ಜಾಸ್ತಿ ಇದ್ದಲ್ಲಿ 1 ಕೇಂದ್ರಕ್ಕೆ 75 ವಿದ್ಯಾರ್ಥಿಗಳಂತೆ ಬಾಲಕರು/ಬಾಲಕಿಯರಿಗೆ ಪ್ರತ್ಯೇಕ ಕೇಂದ್ರಗಳನ್ನು ತೆರೆಯಲಾಗುವುದು. ಯಾವುದೇ ಪ್ರತಿಷ್ಠಿತ ಖಾಸಗಿ ಸಂಸ್ಥೆಯು ಸದರಿ ಕಾರ್ಯಕ್ರಮವನ್ನು ನಡೆಸಲು ಮುಂದೆ ಬಂದಲ್ಲಿ ಅಂತವರಿಗೂ ಈ ಕಾರ್ಯವನ್ನು ವಹಿಸಲಾಗುವುದು. ಒಂದು ವೇಳೆ ಅಂತಹ ಸಂಸ್ಥೆಗಳು ಇಲ್ಲದಿದ್ದಲ್ಲಿ ಶಿಕ್ಷಣ ಇಲಾಖೆಯು ಈ ಕೇಂದ್ರಗಳನ್ನು ವ್ಯವಸ್ಥೆಗೊಳಿಸುವುದು. ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳು ಇದರ ಮೇಲ್ವಿಚಾರಣೆ ಮಾಡುವುದು.
5) ಪ್ರತಿ 2 ಗಂಟೆಯ ಭೋಧನೆಗೆ ರೂ. 400/- ಕ್ಕೆ ಮೀರದಂತೆ ಶಿಕ್ಷಕರಿಗೆ ಗೌರವ ಧನವನ್ನು ನೀಡುವುದು. ಪ್ರತಿ ಕೇಂದ್ರಕ್ಕೆ ಒಬ್ಬ ನೋಡೆಲ್ ಅಧಿಕಾರಿಯನ್ನು ಶಿಕ್ಷಣ ಇಲಾಖೆಯಿಂದ ಅಥವಾ ಬೇರೆ ಯಾವುದಾದರೂ ಸಂಘ ಸಂಸ್ಥೆಯಿಂದ ನೇಮಿಸಿ ಅವರಿಗೆ ಗೌರವ ಧನ - ಸಾಧಿಲ್ವಾರು ವೆಚ್ಚವಾಗಿ ಮಾಸಿಕ ರೂ. 1500/-ಕ್ಕೆ ಮೀರದಂತೆ ಹಣ ಪಾವತಿಸಲಾಗುವುದು
6) ಪರಿಹಾರಿಕ ಭೋಧನಾ ಸ್ಥಳದ ಜಾಗವು ಉಚಿತವಾಗಿ ಇರಬೇಕಾಗಿದ್ದು, ಅಲ್ಪಸಂಖ್ಯಾತರ ವಿದ್ಯಾರ್ಥಿಗಳು ಗರಿಷ್ಠ ಸಂಖ್ಯೆಯಲ್ಲಿರುವ ಸಂಬಂಧಪಟ್ಟ ಖಾಸಗಿ /ಸರ್ಕಾರಿ ಶಾಲೆಗಳಲ್ಲಿ ನಡೆಸುವುದು.
7) ಸರ್ಕಾರಿ ಶಾಲೆಗಳಲ್ಲಿ ಪರಿಹಾರಿಕ ಬೋಧನೆಯನ್ನು ನಡೆಸಿದ್ದಲ್ಲಿ ಶೇ. 100 ರಷ್ಟು ಖರ್ಚನ್ನು ಸರ್ಕಾರವು ಭರಿಸತಕ್ಕದ್ದು, ಒಂದು ವೇಳೆ ಪರಿಹಾರಿಕ ಬೋಧನೆಯನ್ನು ಖಾಸಗಿ ಸಂಸ್ಥೆಗಳು ನಡೆಸಿದ್ದಲ್ಲಿ ಶೇ. 75ರಷ್ಟು ವೆಚ್ಚವನ್ನು ಸರ್ಕಾರವು ಭರಿಸುವುದು.
8) ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯು ಅಧ್ಯಾಪಕರುಗಳ ಮತ್ತು ನೋಡೆಲ್ ಅಧಿಕಾರಿಗಳಿಗೆ ಪಾವತಿಸಬೇಕಾದ ಗೌರವ ಧನ, ಇತರೆ ವೆಚ್ಚಗಳು ಮತ್ತು ಕಾರ್ಯಕ್ರಮ ಫಲಪ್ರದ ಅನುಷ್ಠಾನ, ಮೇಲ್ವಿಚಾರಣೆ ಮತ್ತು ಕಾಲಕಾಲೀಕ ಮಾರ್ಗ ಸೂಚಿಗಳನ್ನು ನೀಡುವ ಬಗ್ಗೆ ತೀರ್ಮಾನ ತೆಗೆದುಕೊಳ್ಳುವುದು.

| | | |
|---|---|---|
| 1. | ಸರ್ಕಾರದ ಕಾರ್ಯದರ್ಶಿಗಳು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ | ಅಧ್ಯಕ್ಷರು |
| 2. | ನಿರ್ದೇಶಕರು, ಉರ್ದು ಹಾಗೂ ಇತರೆ ಬಾಷಾ ಅಲ್ಪಸಂಖ್ಯಾತರು, ಶಿಕ್ಷಣ ಇಲಾಖೆ, ಬೆಂಗಳೂರು | ಸದಸ್ಯರು |
| 3. | ನಿರ್ದೇಶಕರು, ಪ್ರಾಥಮಿಕ/ಪ್ರೌಢ ಶಿಕ್ಷಣ ಅಥವಾ ಅವರ ಪ್ರತಿನಿಧಿ ಶಿಕ್ಷಣ ಇಲಾಖೆ, ಬೆಂಗಳೂರು | ಸದಸ್ಯರು |
| 4. | ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು | ಸದಸ್ಯರು |
| 5. | ನಿರ್ದೇಶಕರು, ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

9) ಈ ಕಾರ್ಯಕ್ರಮದ ಒಟ್ಟಾರೆ ಮೇಲ್ವಿಚಾರಣೆಯನ್ನು ರಾಜ್ಯ ಮಟ್ಟದಲ್ಲಿ ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರು ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳು, ಶಿಕ್ಷಣ ಇಲಾಖೆಯ ಸಕ್ರಿಯ ಭಾಗವಹಿಸುವಿಕೆ ಮತ್ತು ಬೆಂಬಲದೊಂದಿಗೆ ನಿರ್ವಹಿಸುವುದು. ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ ಅಧಿಕಾರಿಗಳಿಗೆ ಅನುದಾನವನ್ನು ಬಿಡುಗಡೆ ಮಾಡುವರು.

10) ನಿಗಧಿತ ಕಾರ್ಯಕ್ರಮದ ಬಗ್ಗೆ ಕಾಲಕಾಲಿಕ ಮೇಲ್ವಿಚಾರಣೆ, ಮೌಲ್ಯಮಾಪನವನ್ನು ಜಿಲ್ಲಾ ಮಟ್ಟದಲ್ಲಿ ವ್ಯವಸ್ಥೆ ಮಾಡುವುದು ಹಾಗೂ ಈ ಬಗ್ಗೆ ಪ್ರತಿ ವರ್ಷ ಮಾರ್ಚ್ ಅಂತ್ಯದಲ್ಲಿ ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರು ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವುದು.

**(ಎಲ್ ಎಸ್ ವಾಸನ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

ಪಿ.ಆರ್. 1369

## ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ

ವಿಷಯ : ಕಾರ್ಯನಿರತ ಅಲ್ಪಸಂಖ್ಯಾತರ ಮಹಿಳೆಯರಿಗೆ ವಸತಿನಿಲಯ ಯೋಜನೆ.

ಓದಲಾಗಿದೆ : 1) 2010–11ನೇ ಆಯವ್ಯಯದಲ್ಲಿ ಘೋಷಿಸಿರುವ ಹೊಸ ಯೋಜನೆ.
2)ದಿನಾಂಕ: 17–05–2010ರಂದು ಜರುಗಿದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ 2010–11ನೇ ಸಾಲಿನ ಆಯವ್ಯಯ ಘೋಷಣೆಯಲ್ಲಿ ಅಲ್ಪಸಂಖ್ಯಾತರ ಕಾರ್ಯನಿರತ ಅಲ್ಪಸಂಖ್ಯಾತರ ಮಹಿಳೆಯರಿಗೆ ವಸತಿನಿಲಯ ಸ್ಥಾಪನೆ ಬಗ್ಗೆ ಲೆಕ್ಕ ಶೀರ್ಷಿಕೆ 4225–03–800–0–03ರಡಿಯಲ್ಲಿ ರೂ.300.00 ಲಕ್ಷಗಳನ್ನು ಒದಗಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ದಿನಾಂಕ: 17–05–2010ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ಅಧಿಕಾರಯುಕ್ತಿ ಸಮಿತಿಯ ಸಭೆ ಜರುಗಿದ್ದು, ಅದರಲ್ಲಿ ಮೇಲ್ಕಂಡ ಹೊಸ ಯೋಜನೆಯ ಮಾರ್ಗಸೂಚಿಗಳ ಬಗ್ಗೆ ಚರ್ಚಿಸಿ ಸರ್ಕಾರೇತರ ಸಂಸ್ಥೆಗಳಿಂದ ನಡೆಸಲ್ಪಡುವ ಕಾರ್ಯನಿರತ ಮಹಿಳಾ ವಸತಿನಿಲಯಗಳಿಗೆ ಬಾಡಿಗೆ ನೀಡುವ ಷರತ್ತಿನೊಂದಿಗೆ ಹಾಗೂ ಯೋಜನಾ ಇಲಾಖೆಯು ಸೂಚಿಸಿದಂತೆ ಯೋಜನೆಯ ನಿರ್ವಹಣಾ ಪದ್ಧತಿಯನ್ನು ಜಾರಿ ಮಾಡುವ ಬಗ್ಗೆ ಮತ್ತು ಮೂರು ವರ್ಷಗಳ ನಂತರ ಯೋಜನೆಯ ಮೌಲ್ಯಾಧಾರಿತದ ಬಗ್ಗೆ ಕ್ರಮ ಕೈಗೊಳ್ಳುವಂತೆ ಸೂಚಿಸಿ ಸದರಿ ಯೋಜನೆಗೆ ಅನುಮೋದನೆ ನೀಡಿರುತ್ತದೆ.

ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಸಂಕಇ 127 ಎಂಡಿಎಸ್ 2010, ಬೆಂಗಳೂರು, ದಿನಾಂಕ: 26–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010–11ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಕಾರ್ಯನಿರತ ಅಲ್ಪಸಂಖ್ಯಾತರ ಮಹಿಳೆಯರಿಗೆ ವಸತಿನಿಲಯ ಸ್ಥಾಪನೆಗೆ ಅನುಬಂಧದಲ್ಲಿ ನಿಗಧಿಪಡಿಸಿರುವ ಷರತ್ತಿಗೊಳಪಟ್ಟು ಹಾಗೂ ಯೋಜನಾ ಇಲಾಖೆಯು ಸೂಚಿಸಿದಂತೆ ಕಾರ್ಯಯೋಜನೆಯನ್ನು ಯೋಜನೆಯ ನಿರ್ವಹಣಾ ಪದ್ಧತಿಯನ್ನು ಜಾರಿ ಮಾಡುವ ಬಗ್ಗೆ ಮತ್ತು ಮೂರು ವರ್ಷಗಳ ನಂತರ ಯೋಜನೆಯ ಮೌಲ್ಯಾಧಾರಿತದ ಬಗ್ಗೆ ಕ್ರಮ ಕೈಗೊಳ್ಳುವಂತೆ ಸೂಚಿಸಿ ಸರ್ಕಾರ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**(ಎಲ್ ಎಸ್ ವಾಸನ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

ಅನುಬಂಧ

ಕಾರ್ಯನಿರತ ಅಲ್ಪಸಂಖ್ಯಾತರ ಮಹಿಳೆಯರಿಗೆ ವಸತಿನಿಲಯ ಸ್ಥಾಪನೆ ಬಗ್ಗೆ ಮಾರ್ಗಸೂಚಿಗಳು

**ಯೋಜನೆಯ ಪರಿಚಯ :**

ರಾಜ್ಯದ ಆರ್ಥಿಕ ಬೆಳವಣಿಗೆ ಹಾಗೂ ಮಾರ್ಪಾಡುಗಳ ಹಿನ್ನೆಲೆಯಲ್ಲಿ ಅಲ್ಪಸಂಖ್ಯಾತರ ಮಹಿಳೆಯರು ಉದ್ಯೋಗಾವಕಾಶ ಪಡೆಯಲು ತಮ್ಮ ಮನೆಗಳನ್ನು ತೊರೆದು ಪಟ್ಟಣಗಳಲ್ಲಿ ಉದ್ಯೋಗವನ್ನು ಪಡೆದು, ಆರ್ಥಿಕವಾಗಿ ಬೆಳವಣಿಗೆ ಹೊಂದಲು ಪಟ್ಟಣಗಳಲ್ಲಿ ಬಂದು ನೆಲೆಸುತ್ತಾರೆ. ಈ ನಿಟ್ಟಿನಲ್ಲಿ ಅಲ್ಪಸಂಖ್ಯಾತರ ಮಹಿಳೆಯರು ತಮ್ಮ ವಾಸಕ್ಕಾಗಿ ಸೂಕ್ತ ವಾಸಸ್ಥಳಕ್ಕಾಗಿ ಪರದಾಡಬೇಕಾಗಿರುತ್ತದೆ. ಕಾರ್ಯನಿರತ ಅಲ್ಪಸಂಖ್ಯಾತರ ಮಹಿಳೆಯರಿಗೆ ವಸತಿ ಒದಗಿಸಲು ಹಲವಾರು ಸರ್ಕಾರೇತರ ಸಂಸ್ಥೆಗಳು ವಸತಿನಿಲಯಗಳನ್ನು ಕಟ್ಟುವ ಸಲುವಾಗಿ ಸಹಾಯಧನವನ್ನು ಸರ್ಕಾರದಿಂದ ಕೋರುತ್ತಲಿವೆ. ಸರ್ಕಾರ ಕಾರ್ಯನಿರತ ಅಲ್ಪಸಂಖ್ಯಾತರ ಮಹಿಳೆಯರಿಗೆ ವಸತಿಯನ್ನು ಒದಗಿಸುವ ಸಲುವಾಗಿ ಸ್ಪಂದಿಸಿ ಸರ್ಕಾರೇತರ ಸಂಸ್ಥೆಗಳಿಗೆ, ಕಾರ್ಯನಿರತ ಅಲ್ಪಸಂಖ್ಯಾತರ ಮಹಿಳೆಯರಿಗೆ ವಸತಿನಿಲಯಗಳನ್ನು ನಿರ್ಮಾಣ ಮಾಡಲು ಸೂಕ್ತ ಅನುದಾವನ್ನು ನೀಡುವ ಕಾರ್ಯಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ.

**ಯೋಜನೆಯ ಉದ್ದೇಶ :**

ಅಲ್ಪಸಂಖ್ಯಾತರ ಮಹಿಳೆಯರ ವಸತಿನಿಲಯದ ಪ್ರಸ್ತಾವನೆ ಈ ಕೆಳಕಂಡ ಉದ್ದೇಶಗಳಿಂದ ಕೂಡಿರಬೇಕು.

1) ಕಾರ್ಯನಿರತ ಒಂಟಿ ಅಲ್ಪಸಂಖ್ಯಾತ ಮಹಿಳೆಗೆ, ಅವಿವಾಹಿತ ಮಹಿಳೆಗೆ, ವಿಧವೆಯರಿಗೆ, ವಿವಾಹ ವಿಚ್ಛೇದಿತ ಮಹಿಳೆಗೆ, ಪತಿಯಿಂದ ಬೇರ್ಪಟ್ಟ ಮಹಿಳೆಗೆ ಹಾಗೂ ಮಹಿಳೆಯ ಪತಿ ಬೇರೊಂದು ಸ್ಥಳದಲ್ಲಿ ವಾಸಿಸುವ ವಿವಾಹಿತ ಮಹಿಳೆಗೆ ವಸತಿ ಒದಗಿಸುವುದು ಮತ್ತು ಇವರ ವಯಸ್ಸು 18 ವರ್ಷ ಮೇಲ್ಪಟ್ಟು ಇರಬೇಕು;
2) ಉದ್ಯೋಗಕ್ಕಾಗಿ ತರಬೇತಿ ಪಡೆಯುತ್ತಿರುವ ಅಲ್ಪಸಂಖ್ಯಾತರ ಮಹಿಳೆಯರಿಗೆ ವಸತಿ ಒದಗಿಸುವುದು. ತರಬೇತಿಯ ಅವಧಿ ಒಂದು ವರ್ಷಕ್ಕೆ ಮೀರಿರಬಾರದು. ಈ ವರ್ಗಕ್ಕೆ ಸೇರಿದ ಮಹಿಳೆಯವರು ವಸತಿನಿಲಯದಲ್ಲಿ ಶೇ.30ಕ್ಕೆ ಮೀರಿರಬಾರದು;
3) ಕಾರ್ಯನಿರತ ಅಲ್ಪಸಂಖ್ಯಾತರ ಮಹಿಳೆಯರ ವಸತಿನಿಲಯಗಳಲ್ಲಿ ವಸತಿ ಲಭ್ಯವಿದ್ದಲ್ಲಿ, ಕಾರ್ಯನಿರತ ಅಲ್ಪಸಂಖ್ಯಾತರ ಮಹಿಳೆಯರಿಗೆ ಮೊದಲ ಆದ್ಯತೆ ನೀಡಿದ ನಂತರ, ಅಲ್ಪಸಂಖ್ಯಾತರ ಮಹಿಳಾ ವಿದ್ಯಾರ್ಥಿಗಳಿಗೆ ವಸತಿ ಕಲ್ಪಿಸುವುದು. ಅಲ್ಪಸಂಖ್ಯಾತರ ಮಹಿಳಾ ವಿದ್ಯಾರ್ಥಿಗಳಿಗೆ ಸಂಬಂಧಿಸಿದಂತೆ ವಸತಿ ಸೌಕರ್ಯ ಗರಿಷ್ಠ 5 ವರ್ಷಗಳಿಗೆ ಮಾತ್ರ ನೀಡುವುದು ಹಾಗೂ ವೃತ್ತಿಪರ ಶಿಕ್ಷಣ ವಿದ್ಯಾರ್ಥಿಗಳಿಗೆ ಆದ್ಯತೆ ನೀಡುವುದು. ಇವರ ಸಂಖ್ಯೆ ವಸತಿ ನಿಲಯದ ಒಟ್ಟಾರೆ ಸಂಖ್ಯೆಯಲ್ಲಿ ಶೇ.30ಕ್ಕೆ ಮೀರಿರಬಾರದು.
4) ಉದ್ಯೋಗಕ್ಕಾಗಿ ತರಬೇತಿ ಪಡೆಯುವ ಮಹಿಳೆಯರು ತರಬೇತಿಯ ನಂತರ ಉದ್ಯೋಗ ಕಲ್ಪಿಸಿದ್ದಲ್ಲಿ, ಅಂತಹವರು ಕಾರ್ಯನಿರತ ಅಲ್ಪಸಂಖ್ಯಾತರ ಮಹಿಳೆಯರ ವಸತಿನಿಲಯಗಳಲ್ಲಿ ವಾಸಿಸಲು ಅರ್ಹರಿರುತ್ತಾರೆ.

**ವಸತಿನಿಲಯಗಳನ್ನು ನಿರ್ವಹಿಸುವ ಸಂಸ್ಥೆಗಳ ಅರ್ಹತೆ ಬಗ್ಗೆ :**

1) ಅಲ್ಪಸಂಖ್ಯಾತರ ಮಹಿಳೆಯರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಕಲ್ಯಾಣಕ್ಕಾಗಿ ದುಡಿಯುವ ಸರ್ಕಾರೇತರ ಸಂಸ್ಥೆಗಳು, ಸಹಕಾರ ಸಂಘಗಳ ಅಧಿನಿಯಮದಡಿ ನೋಂದಾಯಿತ ಸಂಘಗಳು ಹಾಗೂ ಅನುದಾನಿತ ಸಂಸ್ಥೆಗಳು ವಸತಿನಿಲಯಗಳನ್ನು ಸ್ಥಾಪಿಸಲು ಅವಕಾಶವಿದ್ದು, ಇಂತಹ ಸಂಸ್ಥೆಗಳು ಅನುದಾನಕ್ಕೆ ಅರ್ಹತೆ ಹೊಂದಿರುವವು.

2) ವಸತಿನಿಲಯಗಳನ್ನು ಪ್ರಾರಂಭಿಸಲು ಇಚ್ಛಿಸುವ ಸರ್ಕಾರೇತರ ಮಹಿಳೆಯರ ಸಂಘ ಸಂಸ್ಥೆಗಳು ಮತ್ತು ವಕ್ಫ್ ಸಂಸ್ಥೆಗಳು ಅರ್ಹರಿರುತ್ತಾರೆ.

3) ಸರ್ಕಾರೇತರ ಸಂಘ ಸಂಸ್ಥೆಗಳು ವಸತಿನಿಲಯಗಳನ್ನು ಪ್ರಾರಂಭಿಸಲು ಆರ್ಥಿಕ ಸಭಲತೆ, ಸಿಬ್ಬಂದಿ, ಸಂಪನ್ಮೂಲಗಳು ಹಾಗೂ ಅನುಭವವನ್ನು ಹೊಂದಿರಬೇಕು.

4) ವಸತಿನಿಲಯಗಳನ್ನು ಲಾಭದ ಗುರಿಯನ್ನು ಇಟ್ಟುಕೊಳ್ಳದೇ ಅಲ್ಪಸಂಖ್ಯಾತರ ಮಹಿಳೆಯರ ಕಲ್ಯಾಣ ದೃಷ್ಟಿಯಿಂದ ಲಾಭ ಅಥವಾ ನಷ್ಟಗಳನ್ನು ಗಣನೆಗೆ ತೆಗೆದುಕೊಳ್ಳದೇ ನಿರ್ವಹಿಸತಕ್ಕದ್ದು.

**ಸರ್ಕಾರದಿಂದ ಆರ್ಥಿಕ ಅನುದಾನ ಮಂಜೂರಾತಿ :**

ಅ) ವಸತಿನಿಲಯದ ನಿರ್ಮಾಣಕ್ಕಾಗಿ ಸ್ವಂತ ನಿವೇಶನ ಅಥವಾ ಕಟ್ಟಡ ಅಥವಾ ಸೂಕ್ತ ಬಾಡಿಗೆ ಕಟ್ಟಡವನ್ನು ಹೊಂದಿರಬೇಕು;

ಆ) ಸ್ವಂತ ಕಟ್ಟಡ ಇದ್ದಲ್ಲಿ ಅಥವಾ ಬಾಡಿಗೆ ಕಟ್ಟಡ ಇದ್ದಲ್ಲಿ, ಲೋಕೋಪಯೋಗಿ ಇಲಾಖೆ ಅಧಿಕಾರಿಗಳು ನಿಗಧಿಪಡಿಸಬಹುದಾದ ಬಾಡಿಗೆ ದರಕ್ಕೆ ಶೇ.50%ರಷ್ಟು ಸಹಾಯಧನ ನೀಡಲಾಗುವುದು;

ಇ) ವಸತಿನಿಲಯಕ್ಕಾಗಿ ಪಡೆಯುವ ಕಟ್ಟಡ ಅಥವಾ ಕಟ್ಟಲು ಉದ್ದೇಶಿಸುವ ಕಟ್ಟಡದಲ್ಲಿ ಗರಿಷ್ಠ 100 ಮಹಿಳೆಯರಿಗೆ ವಸತಿ ಕಲ್ಪಿಸುವಂತೆ ಇರಬೇಕು.

ಈ) 50 ಅಲ್ಪಸಂಖ್ಯಾತರ ಮಹಿಳೆಯರನ್ನು ಹೊಂದಿರುವ ಉದ್ಯೋಗ ನಿರತ ವಸತಿನಿಲಯಕ್ಕೆ ಅಗತ್ಯವಿರುವ ಪೀಠೋಪಕರಣಗಳು, ಪಾತ್ರೆಗಳು, ಸಲಕರಣೆಗಳು ಇತ್ಯಾದಿಗಳನ್ನು ಖರೀದಿಸಲು ಶೇ.75%ರಷ್ಟು ಅಥವಾ ಗರಿಷ್ಠ ರೂ.5.00 ಲಕ್ಷಕ್ಕೆ ಮಿತಿಗೊಳಿಸಿ, ಒಂದು ಸಲ ಮಾತ್ರ ಸಹಾಯಧನ ನೀಡಲಾಗುವುದು;

ಉ) ವಸತಿನಿಲಯಗಳಿಗಾಗಿ ಸರ್ಕಾರೇತರ ಸಂಘ ಸಂಸ್ಥೆಗಳು ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರಗಳ ಇಲಾಖೆಗಳಿಂದ ಈಗಾಗಲೇ ಅನುದಾನ ಪಡೆದಿದ್ದಲ್ಲಿ, ಅಂತಹ ಸಂಘ ಸಂಸ್ಥೆಗಳು ಈ ಯೋಜನೆಯಡಿಯಲ್ಲಿ ಅನುದಾನ ಪಡೆಯಲು ಅರ್ಹವಿರುವುದಿಲ್ಲ.

ಊ) ವಿಶೇಷ ಪ್ರಕರಣಗಳಲ್ಲಿ ವಿಧವೆ, ನಿರ್ಗತಿಕರು ಮತ್ತು ವಿದ್ಯಾರ್ಥಿನಿಯರ ಊಟದ ಖರ್ಚಿಗಾಗಿ ಸರ್ಕಾರವು ಪ್ರತಿ ಮಾಹೆ ಒಬ್ಬರಿಗೆ ರೂ.650.00ಕ್ಕೆ ಮೀರದಂತೆ ಮಂಜೂರಾಗಿ ನೀಡಲಾಗುವುದು;

ಋ) ಸರ್ಕಾರೇತರ ಸಂಸ್ಥೆಗಳು ತನ್ನ ವ್ಯವಸ್ಥಾಪನ ಸಮಿತಿಯಲ್ಲಿ ಅಲ್ಪಸಂಖ್ಯಾತರ ನಿರ್ದೇಶನಾಲಯದ ಒಬ್ಬ ಪ್ರತಿನಿಧಿಯನ್ನು ಸೇರಿಸಿಕೊಳ್ಳತಕ್ಕದ್ದು;

**ಅರ್ಜಿ ಸಲ್ಲಿಸುವ ವಿಧಾನ :**

ಉದ್ಯೋಗ ನಿರತ ವಸತಿ ನಿಲಯದ ಮಂಜೂರಾತಿಗಾಗಿ ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯದ, ನಿರ್ದೇಶಕರಿಗೆ ಅರ್ಜಿ ಸಲ್ಲಿಸುವುದು. ನಿರ್ದೇಶಕರು ಒಂದು ತಿಂಗಳ ಅವಧಿಯೊಳಗೆ, ಪರಿಶೀಲನೆಯ ನಂತರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವುದು. ಸರ್ಕಾರದ ಹಂತದಲ್ಲಿ ಒಂದು ತಿಂಗಳ ಅವಧಿಯಲ್ಲಿ ಪ್ರಸ್ತಾವನೆಯನ್ನು ಇತ್ಯರ್ಥಪಡಿಸುವುದು;

ಈ ಯೋಜನೆಯನ್ನು ಕಾರ್ಯರೂಪಕ್ಕೆ ತರುವುದಕ್ಕೆ ಮತ್ತು ಇತರೆ ಸಮಸ್ಯೆಗಳನ್ನು ಬಗೆಹರಿಸುವುದಕ್ಕೆ ಮತ್ತು ಸೂಕ್ತ ಮಾರ್ಗಸೂಚಿಗಳನ್ನು ನೀಡುವುದಕ್ಕೆ ಈ ಕೆಳಕಂಡಂತೆ ಸಮಿತಿ ರಚಿಸಲಾಗುವುದು.

| | | |
|---|---|---|
| 1. ಸರ್ಕಾರದ ಕಾರ್ಯದರ್ಶಿಗಳು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ | .. | ಅಧ್ಯಕ್ಷರು |
| 2. ಸರ್ಕಾರದ ಉಪ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ | .. | ಸದಸ್ಯರು |
| 3. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಅಥವಾ ಅವರ ಪ್ರತಿನಿಧಿ. | .. | ಸದಸ್ಯರು |
| 4. ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ | .. | ಸದಸ್ಯ ಕಾರ್ಯದರ್ಶಿ |

ಅರ್ಜಿಯೊಂದಿಗೆ ಸರ್ಕಾರೇತರ ಸಂಘ ಸಂಸ್ಥೆಗಳ ಧ್ಯೇಯೋದ್ದೇಶಗಳಿಂದ ಕೂಡಿದ ಪರಿಚಯ ಪತ್ರ, ಸಂಘ ಸಂಸ್ಥೆಯ ಸಂವಿಧಾನ ಹಾಗೂ ಸಂಘ ಸಂಸ್ಥೆಯ ಇತ್ತೀಚಿನ ವಾರ್ಷಿಕ ವರದಿ, ನಿವೇಶನ ಅಥವಾ ಕಟ್ಟಡದ ನಕಾಶೆ, ನಿವೇಶನ ಅಥವಾ ಕಟ್ಟಡದ ಮಾಲೀಕತ್ವದ ದೃಢೀಕರಣ ಪ್ರತಿಗಳನ್ನು ಲಗತ್ತಿಸುವುದು ;

**(ಎಲ್ ಎಸ್ ವಾಸನ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

ಪಿ.ಆರ್. 1370

**ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ**

ವಿಷಯ : ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಿಂದ ವಿವಿಧ ಸಮುದಾಯಗಳ ಅಭಿವೃದ್ಧಿ ಅಡಿಯಲ್ಲಿ ಅಲ್ಪಸಂಖ್ಯಾತರ ಸಂಸ್ಥೆಗಳಿಗೆ ಅನುದಾನ ಬಿಡುಗಡೆಯ ಯೋಜನೆ.

ಓದಲಾಗಿದೆ : 1) ದಿನಾಂಕ: 17–05–2010ರಂದು ಜರುಗಿದ ಅಧಿಕಾರಯುಕ್ತ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

2010–11ನೇ ಸಾಲಿನ ಆಯವ್ಯಯದಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಿಂದ ವಿವಿಧ ಸಮುದಾಯಗಳ ಅಭಿವೃದ್ಧಿ ಅಡಿಯಲ್ಲಿ ಅಲ್ಪಸಂಖ್ಯಾತರ ಸಂಸ್ಥೆಗಳಿಗೆ ಅನುದಾನ ಬಿಡುಗಡೆಯ ಯೋಜನೆಗೆ ಲೆಕ್ಕ ಶೀರ್ಷಿಕೆ 2225–03–800–0–18–101ರಡಿಯಲ್ಲಿ ರೂ.200.00 ಲಕ್ಷಗಳನ್ನು ಒದಗಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ದಿನಾಂಕ: 17–05–2010ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ಅಧಿಕಾರಯುಕ್ತಿ ಸಮಿತಿಯ ಸಭೆ ಜರುಗಿದ್ದು, ಸದರಿ ಯೋಜನೆಯಲ್ಲಿ ಸರ್ಕಾರೇತರ ಸಂಸ್ಥೆಗಳು ನಿರ್ಮಿಸುವ ಸಮುದಾಯ ಭವನ ಕಟ್ಟಡಗಳಿಗೆ ಧನ ಸಹಾಯ ಮಂಜೂರು ಮಾಡುವ ಕಾರ್ಯಕ್ರಮ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿದ್ದು, ಈ ಕಾರ್ಯಕ್ರಮಕ್ಕೆ ಧನ ಸಹಾಯ ಮಾಡುವ ಉದ್ದೇಶವಾಗಿದ್ದು, ಈ ಬಗ್ಗೆ ಸಮಿತಿಯಲ್ಲಿ ಚರ್ಚಿಸಿ ಅಂತಿಮವಾಗಿ ವಸತಿನಿಲಯಗಳ ಕಟ್ಟಡಗಳಿಗೆ ಮಾತ್ರ ಧನ ಸಹಾಯ ನೀಡಲು ಅಧಿಕಾರಯುಕ್ತ ಸಮಿತಿಯು ಯೋಜನೆಯನ್ನು ಅನುಮೋದಿಸಿತು.

ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಸಂಕಇ 131 ಎಂಡಿಎಸ್ 2010, ಬೆಂಗಳೂರು, ದಿನಾಂಕ: 26-05-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010-11ನೇ ಸಾಲಿನ ಆಯವ್ಯಯದಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಿಂದ ವಿವಿಧ ಸಮುದಾಯಗಳ ಅಭಿವೃದ್ಧಿ ಅಡಿಯಲ್ಲಿ ಅಲ್ಪಸಂಖ್ಯಾತರ ಸಂಸ್ಥೆಗಳಿಗೆ ಅನುದಾನ ಬಿಡುಗಡೆಯ ಯೋಜನೆಗೆ ಅನುಬಂಧದಲ್ಲಿ ನಿಗಧಿಪಡಿಸಿರುವ ಷರತ್ತಿಗೊಳಪಟ್ಟು ಸರ್ಕಾರ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಲ್ ಎಸ್ ವಾಸನ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

ಅನುಬಂಧ

ವಿವಿಧ ಸಮುದಾಯಗಳಿಗೆ ವಿದ್ಯಾರ್ಥಿನಿಲಯದ ಕಟ್ಟಡಗಳ ನಿರ್ಮಾಣಕ್ಕೆ ಸಹಾಯಧನ
ಕಾರ್ಯಕ್ರಮದ ಮಾರ್ಗಸೂಚಿಗಳು

1. ಈ ಕಾರ್ಯಕ್ರಮದಡಿ ಅನುದಾನ ಪಡೆಯಲು ವಿವಿಧ ಸಮುದಾಯಗಳಿಗೆ ಸೇರಿದ ನೋಂದಾಯಿತ ಸ್ವಯಂ ಸೇವಾ ಸಂಸ್ಥೆಗಳು/ವಕ್ಫ್ ಸಂಸ್ಥೆಗಳು ಮಾತ್ರ ಅರ್ಹವಿರುತ್ತವೆ.
2. ಅನುದಾನ ಪಡೆಯುವ ಸಂಸ್ಥೆಯು ಕರ್ನಾಟಕ ರಾಜ್ಯದಲ್ಲಿ ಕರ್ನಾಟಕ ಸಹಕಾರಿ ಸಂಘಗಳ ನೋಂದಣಿಯ ನಿಯಮಗಳನ್ವಯ/ಕರ್ನಾಟಕ ಸಂಘಗಳ ನೋಂದಣಿಯ/ನೋಂದಾಯಿತ ಟ್ರಸ್ಟ್/ವಕ್ಫ್ ಸಂಸ್ಥೆಯಾಗಿರಬೇಕು.
3. ಸರ್ಕಾರದ ವತಿಯಿಂದ ನೀಡಲಾಗುವ ಅನುದಾನವು ಉದ್ದೇಶಿತ ಕಟ್ಟಡದ ಅಂದಾಜು ವೆಚ್ಚದ ಶೇಕಡಾ 50ರಷ್ಟು ಇದ್ದು ಗರಿಷ್ಠ ರೂ.10.00 ಲಕ್ಷಕ್ಕೆ ಸೀಮಿತವಾಗಿರುತ್ತದೆ. ಬಾಕಿ ಮೊತ್ತವನ್ನು ಸ್ವಯಂ ಸೇವಾ ಸಂಸ್ಥೆ/ವಕ್ಫ್ ಸಂಸ್ಥೆಗಳೇ ಭರಿಸಬೇಕು. ಯಾವುದೇ ರೀತಿಯಲ್ಲಿಯೂ ಹೆಚ್ಚುವರಿ ಅನುದಾನಕ್ಕೆ ಸಂಸ್ಥೆಗಳು ಸರ್ಕಾರವನ್ನು ಕೋರತಕ್ಕದ್ದಲ್ಲ.
4. ಅನುದಾನ ಬಯಸುವ ಸ್ವಯಂ ಸೇವಾ ಸಂಸ್ಥೆಗಳು/ವಕ್ಫ್ ಸಂಸ್ಥೆಗಳು ಉದ್ದೇಶಿಸಿರುವ ಕಟ್ಟಡ ನಿರ್ಮಾಣಕ್ಕೆ ತಮ್ಮ ಸಂಸ್ಥೆಯ ಹೆಸರಿನಲ್ಲಿ ಜಮೀನು/ನಿವೇಶನವನ್ನು ಹೊಂದಿರಬೇಕು ಅಥವಾ ಇತರೆ ಸರ್ಕಾರಿ/ಸರ್ಕಾರೇತರ ಸಂಸ್ಥೆಗಳಿಂದ ಕನಿಷ್ಠ 30 ವರ್ಷಗಳಿಗಿಂತ ಕಡಿಮೆ ಇಲ್ಲದ ಅವಧಿಗೆ ಭೋಗ್ಯಕ್ಕೆ ಪಡೆದಿರಬೇಕು ಅಥವಾ ವಕ್ಫ್ ಸಂಸ್ಥೆಯ ಸ್ವತ್ತಾಗಿರಬೇಕು.
5. ಅನುದಾನವನ್ನು ಜಿಲ್ಲೆಯ ಜಿಲ್ಲಾಧಿಕಾರಿಗಳ ಮೂಲಕ ಬಿಡುಗಡೆ ಮಾಡಲಾಗುವುದು. ಜಿಲ್ಲಾಧಿಕಾರಿಯವರು ಅನುದಾನವನ್ನು ಸಂಸ್ಥೆಗಳಿಗೆ ಮರು ಬಿಡುಗಡೆ ಮಾಡುವ ಮುನ್ನ ಕಟ್ಟಡದ ಪ್ರಗತಿಯನ್ನು ಆಧರಿಸಿ 2 ಹಂತಗಳಲ್ಲಿ ಬಿಡುಗಡೆ ಮಾಡತಕ್ಕದ್ದು.
6. ವಿದ್ಯಾರ್ಥಿನಿಲಯದ ಕಟ್ಟಡ ನಿರ್ಮಾಣಕ್ಕೆ ಮೊದಲನೇ ಕಂತಿನ ಅನುದಾನ ಪಡೆದ ದಿನಾಂಕದಿಂದ 2 ವರ್ಷಗಳೊಳಗಾಗಿ ಕಟ್ಟಡ ನಿರ್ಮಿಸದಿದ್ದಲ್ಲಿ, ಮಂಜೂರು ಮಾಡಿದ ಹಣವನ್ನು ಶೇಕಡ 18ರ ಬಡ್ಡಿಯ ಮೇಲೆ ವಸೂಲು ಮಾಡಲಾಗುವುದು. ಕಟ್ಟಡ ನಿರ್ಮಾಣಕ್ಕೆ ಹೆಚ್ಚುವರಿ ಕಾಲಾವಕಾಶವನ್ನು ನೀಡಲಾಗುವುದಿಲ್ಲ.
7. ಸರ್ಕಾರದ ಅನುದಾನದಿಂದ ನಿರ್ಮಿತವಾದ ವಿದ್ಯಾರ್ಥಿನಿಲಯ ಕಟ್ಟಡವನ್ನು ಅಲ್ಪಸಂಖ್ಯಾತರ ವರ್ಗಗಳಿಗೆ ಸೇರಿದ ಇತರೆ ಸಮುದಾಯದವರಿಗೂ ಸಾಮಾಜಿಕ ಚಟುವಟಿಕೆಗಳಿಗೆ ಅಗತ್ಯವಿದ್ದಲ್ಲಿ ರಿಯಾಯಿತಿ ದರದಲ್ಲಿ ನೀಡತಕ್ಕದ್ದು.
8. ಸರ್ಕಾರದ ಅನುದಾನದಿಂದ ನಿರ್ಮಿತವಾದ ವಿದ್ಯಾರ್ಥಿನಿಲಯದ ಕಟ್ಟಡಗಳನ್ನು ರಾಜಕೀಯ ಚಟುವಟಿಕೆಗಳಿಗೆ ಉಪಯೋಗಿಸಬಾರದು.
9. ವಿವಿಧ ಸಮುದಾಯಗಳಿಗೆ ವಿದ್ಯಾರ್ಥಿನಿಲಯದ ಕಟ್ಟಡ ನಿರ್ಮಾಣಕ್ಕಾಗಿ ಅನುದಾನ ಪಡೆಯುವ ಸಂಸ್ಥೆಗಳು ಕಟ್ಟಡದ ನಕ್ಷೆಗೆ ಸ್ಥಳೀಯ ನಗರಸಭೆ/ಪುರಸಭೆ/ ಪಂಚಾಯ್ತಿಯಿಂದ ಅನುಮೋದನೆ ಮತ್ತು ಪರವಾನಗಿ ಪಡೆದಿರಬೇಕು ಹಾಗೂ ಅಂದಾಜು ಪಟ್ಟಿಯು ಅಂಗೀಕೃತ ಅಭಿಯಂತರರಿಂದ ತಯಾರಿಸಲ್ಪಟ್ಟಿರಬೇಕು.
10. ಅಲ್ಪಸಂಖ್ಯಾತರ ವರ್ಗಗಳಿಗೆ ವಿದ್ಯಾರ್ಥಿನಿಲಯದ ಕಟ್ಟಡ ನಿರ್ಮಾಣ ವೆಚ್ಚದ ಅಂದಾಜು ಕನಿಷ್ಠ ರೂ.20.00 ಲಕ್ಷಗಳಿರಬೇಕು. ಇದಕ್ಕೆ ಮೇಲ್ಪಟ್ಟು ಅಂದಾಜು ವೆಚ್ಚ ಇದ್ದಲ್ಲಿ ಸದರಿ ಸಂಸ್ಥೆಯೇ ಹೆಚ್ಚುವರಿ ಹಣವನ್ನು ಭರಿಸತಕ್ಕದ್ದು.
11. ಒಂದು ಸಂಘ ಅಥವಾ ಸಂಸ್ಥೆಯು ಒಂದೇ ಬಾರಿ ಮಾತ್ರ ಅನುದಾನಕ್ಕೆ ಅರ್ಹವಾಗಿರುತ್ತದೆ.
12. ಅನುದಾನ ಪಡೆಯಲಿಚ್ಛಿಸುವ ಸ್ವಯಂ ಸೇವಾ ಸಂಸ್ಥೆಗಳು ಈ ಕೆಳಕಂಡ ದಾಖಲಾತಿಗಳೊಂದಿಗೆ ನಿಗಧಿತ ನಮೂನೆಯಲ್ಲಿ ಅರ್ಜಿಯನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಸಲ್ಲಿಸಬೇಕು. ಜಿಲ್ಲಾಧಿಕಾರಿಗಳು ಅರ್ಜಿ

ಹಾಗೂ ಇತರೆ ದಾಖಲಾತಿಗಳನ್ನು ಮತ್ತು ಸಂಸ್ಥೆಯ ಆರ್ಥಿಕ ಪರಿಸ್ಥಿತಿಯನ್ನು ಪರಿಶೀಲಿಸಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳ ಮೂಲಕ ಸ್ಥಳ ಪರಿಶೀಲನೆ ನಡೆಸಿ ಪ್ರಸ್ತಾವನೆಯನ್ನು ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸಬೇಕು.
ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಇವರು ಜಿಲ್ಲಾಧಿಕಾರಿಗಳಿಂದ ಸ್ವೀಕರಿಸಿದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಹಾಯಧನ ಮಂಜೂರು ಮಾಡಲು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

13. ಕಾಮಗಾರಿ ಕೈಗೊಂಡ ನಂತರ ಪ್ರಗತಿ ಆಧರಿಸಿ, ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡುವುದು. ಅನುದಾನ ಉಪಯೋಗಿಸಿದ ಬಗ್ಗೆ ಸಂಬಂಧಿಸಿದವರಿಂದ ಅನುದಾನ ಉಪಯೋಗ ಪ್ರಮಾಣ ಪತ್ರ ಪಡೆಯುವುದು.

**(ಎಲ್ ಎಸ್ ವಾಸನ್)**
ಪಿ.ಆರ್. 1371 ಸರ್ಕಾರದ ಅಧೀನ ಕಾರ್ಯದರ್ಶಿ
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು ಮಜ್ಜೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ : 21–7–07ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಭೂಸ್ವಾಪ್ರ/2007–08/6089.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು ಮಜ್ಜೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ವರವಿ ಮತ್ತು ಮಜ್ಜೂರ ಗ್ರಾಮಗಳ ಜಮೀನುಗಳಿಗೆ ಗದಗ್‌ನ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 28–08–97.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 06–11–2000.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗದಗ್ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರಮ ಸಂಖ್ಯೆ | ಎಲ್ಎಸಿ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ. | ಗ್ರಾಮ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 516/01 | 91/4ಎ | 0–05 | ವರವಿ | 4919 |
| 2 | 518/01 | 81/ಎ | 0–18 | ವರವಿ | 17705 |
| 3 | 520/01 | 88 | 2–00 | ವರವಿ | 78686 |
| 4 | 522/01 | 79/1 | 0–06 | ವರವಿ | 5902 |
| 5 | 524/01 | 27/1ಎ | 0–37 | ಮಜ್ಜೂರ | 36394 |
| 6 | 526/01 | 16/6 | 0–17 | ಮಜ್ಜೂರ | 16722 |
| 7 | 528/01 | 25/1ಎ | 3–27 | ಮಜ್ಜೂರ | 144586 |

| | | | | | |
|---|---|---|---|---|---|
| 8 | 530/01 | 25/2 | 2–12 1/2 | ಮಜ್ಜೂರ | 90983 |
| 9 | 532/01 | 25/4 | 2–12 | ಮಜ್ಜೂರ | 90489 |
| ಒಟ್ಟು | | | | | 486386 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 118 ಭೂಸ್ವಾಪ್ರ 2007, ಬೆಂಗಳೂರು, ದಿನಾಂಕ : 28–05–2010**

ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು ಮಜ್ಜೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ವರವಿ ಮತ್ತು ಮಜ್ಜೂರ ಗ್ರಾಮಗಳಿಗೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 4,86,386–00ಗಳನ್ನು (ನಾಲ್ಕು ಲಕ್ಷದ ಎಂಭತ್ತಾರು ಸಾವಿರದ ಮುನ್ನೂರ ಎಂಭತ್ತಾರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010–11 ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1430

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ವಸತಿ ಸಚಿವಾಲಯ

**ವಿಷಯ :** ಮುಂಡಗೋಡ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಂ.ವಇ 42 ಹೆಚ್‌ಎಎಂ 1999 ದಿನಾಂಕ : 10–05–2000.

2. ಸರ್ಕಾರದ ಆದೇಶ ಸಂಖ್ಯೆ : ಸಂ.ವಇ 18 ಹೆಚ್‌ಎಎಸ್ 2008 ದಿನಾಂಕ : 16–09–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಹಾಗೂ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತ ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 33 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ : 28–05–2010**

ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀಮತಿ ಶಾಂತಾ ನಾಗಪ್ಪ ದೊಡ್ಡಮನಿ, ನೆಹರುನಗರ, ಮುಂಡಗೋಡ | ಪರಿಶಿಷ್ಟ ಜಾತಿ (ಮಹಿಳೆ) |
| 2 | ಶ್ರೀ ಬಸವರಾಜ ಹಂಚಿನಮನೆ, ಕಲಾಲ ಓಣಿ, ಮುಂಡಗೋಡ | ಸಾಮಾನ್ಯ |
| 3 | ಶ್ರೀ ವೃಷಭರಾಜು ಎ. ಅಂಗಡಿ, ನೆಹರುನಗರ, ಮುಂಡಗೋಡ | ಅಲ್ಪಸಂಖ್ಯಾತರು |
| 4 | ಶ್ರೀ ಠಿಕ್ಕುಸಾ ಎಸ್. ಪವಾರ್, ಗಾಂಧಿನಗರ, ಮುಂಡಗೋಡ | ಹಿಂದುಳಿದ ವರ್ಗ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1431

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2

ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಇಂಡಿ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ : ಸಂ.ವಇ 42 ಹೆಚ್‌ಎಎಂ 1999 ದಿನಾಂಕ : 10–05–2000.

**(2)** ಸರ್ಕಾರದ ಆದೇಶ ಸಂಖ್ಯೆ : ಸಂ.ವಇ 18 ಹೆಚ್‌ಎಎಸ್ 2008 ದಿನಾಂಕ : 16–09–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಹಾಗೂ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತ ಬಿಜಾಪುರ ಜಿಲ್ಲೆಯ ಇಂಡಿ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 34 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ : 28–05–2010**

ಬಿಜಾಪುರ ಜಿಲ್ಲೆಯ ಇಂಡಿ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಮಲ್ಲಪ್ಪ ಅಣ್ಣಪ್ಪ, ದೇವರ್, ಇಂಡಿ | ಸಾಮಾನ್ಯ |
| 2 | ಶ್ರೀ ಖಾಜಾಸಾಬ್ ಚೆಂದಾಸಾಬ್ ಪಟೇಲ್, ಇಂಡಿ | ಅಲ್ಪಸಂಖ್ಯಾತರು |
| 3 | ಶ್ರೀ ಪ್ರದೀಪ್ ನಾಮದೇವ್ ಮುರಮನ್, ಇಂಡಿ | ಪರಿಶಿಷ್ಟ ಜಾತಿ |
| 4 | ಶ್ರೀಮತಿ ಸುಮಂಗಲ ರವೀಂದ್ರ ನಿಗಡಿ, ಇಂಡಿ | ಹಿಂದುಳಿದ ವರ್ಗ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1432

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಯಲ್ಲಾಪುರ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ : ಸಂ.ವಇ 42 ಹೆಚ್‌ಎಎಂ 1999 ದಿನಾಂಕ : 10–05–2000.

**(2)** ಸರ್ಕಾರದ ಆದೇಶ ಸಂಖ್ಯೆ : ಸಂ.ವಇ 18 ಹೆಚ್‌ಎಎಸ್ 2008 ದಿನಾಂಕ : 16–09–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಹಾಗೂ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 32 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ : 28-05-2010**

ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | **ಅಭ್ಯರ್ಥಿಯ ಹೆಸರು** | **ವರ್ಗ** |
|---|---|---|
| 1 | ಶ್ರೀ ಪ್ರಕಾಶ ಬಸವರಾಜ ಕಟ್ಟೀಮನಿ, 'ವರ್ಷಾ ನಿಲಯ' ಉದ್ಯಮನಗರ, ಯಲ್ಲಾಪುರ | ಪರಿಶಿಷ್ಟ ಜಾತಿ |
| 2 | ಶ್ರೀ ಗೋಪಾಲಕೃಷ್ಣ ನರಸಿಂಹ ಗಾಂವಕರ, ರವೀಂದ್ರನಗರ, ಯಲ್ಲಾಪುರ | ಸಾಮಾನ್ಯ |
| 3 | ಶ್ರೀಮತಿ ಸುಪ್ರಭಾ ಬಾಹುಬಲಿ ಜೈನ್, 'ಉಷಾ ನಿಲಯ' ಕಾಳಮ್ಮನಗರ, ಯಲ್ಲಾಪುರ | ಅಲ್ಪಸಂಖ್ಯಾತರು (ಮಹಿಳೆ) |
| 4 | ಶ್ರೀ ಶಿವಾನಂದ ತಿಮ್ಮಪ್ಪ ನಾಯ್ಕ, ಕಾಳಮ್ಮನಗರ, ಯಲ್ಲಾಪುರ | ಹಿಂದುಳಿದ ವರ್ಗ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1433

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ-2, ವಸತಿ ಇಲಾಖೆ

**ವಸತಿ ಸಚಿವಾಲಯ**

**ವಿಷಯ :** ಕೊಪ್ಪಳ ಜಿಲ್ಲೆ, ಗಂಗಾವತಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ : ಸಂ.ವಇ 42 ಹೆಚ್‌ಎಎಂ 1999 ದಿನಾಂಕ : 10-05-2000.

(2) ಸರ್ಕಾರದ ಆದೇಶ ಸಂಖ್ಯೆ : ಸಂ.ವಇ 18 ಹೆಚ್‌ಎಎಂ 2008 ದಿನಾಂಕ : 16-09-2009.

**ಪ್ರಸ್ತಾವನೆ:**

ನಗರ ಆಶ್ರಯ ಸಮಿತಿಗಳ ರಚನೆ ಕುರಿತು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಹಾಗೂ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತ ಕೊಪ್ಪಳ ಜಿಲ್ಲೆಯ ಗಂಗಾವತಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 01 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ : 31-05-2010**

ಕೊಪ್ಪಳ ಜಿಲ್ಲೆಯ ಗಂಗಾವತಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | **ಅಭ್ಯರ್ಥಿಯ ಹೆಸರು** | **ವರ್ಗ** |
|---|---|---|
| 1 | ಕು. ಲಲಿತಾ ಬಿನ್ ಲಿಂಗಪ್ಪ ಚಲುವಾದಿ, ಸಾ: ಹಿರೇಜಂತಕಲ್, ಗಂಗಾವತಿ | ಪರಿಶಿಷ್ಟ ಜಾತಿ (ಮಹಿಳೆ) |
| 2 | ಶ್ರೀ ನಾಗಲಿಂಗಪ್ಪ ಬಿನ್ ಬಾಳಾಚಾರಿ ಪತ್ತಾರ, ಸಾ: ಭಗತ್‌ಸಿಂಗ್, ಗಂಗಾವತಿ | ಹಿಂದುಳಿದ ವರ್ಗ |
| 3 | ಶ್ರೀ ಬಿ. ನಾರಾಯಣಪ್ಪ ಬಿನ್ ಕಲ್ಲಪ್ಪ ಉಪ್ಪಾರ, ಸಾ: ಹಿರೇಜಂತಕಲ್, ಗಂಗಾವತಿ | ಅಲ್ಪಸಂಖ್ಯಾತರು |
| 4 | ಶ್ರೀ ಶಾಂತವೀರಪ್ಪ ಸಿದ್ದಾಪೂರ ಬಿನ್ ಬಸಪ್ಪ ಸಿದ್ದಾಪೂರ, ಸಾ: ಬಸವಣ್ಣ ಸರ್ಕಲ್, ಗಂಗಾವತಿ | ಸಾಮಾನ್ಯ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1434

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ-2, ವಸತಿ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ :** ಕಳೆದ 5 ವರ್ಷಗಳಲ್ಲಿ ಅಭಿಯೋಗಗಳ ನಿರ್ದೇಶನಾಲಯದಲ್ಲಿ ಜನ್ಮ ದಿನಾಂಕ ಬದಲಾವಣೆ ಬಂದಿರುವ ಪ್ರಸ್ತಾವನೆಗಳ ಬಗ್ಗೆ ಸಿ.ಐ.ಡಿ. ವಿಚಾರಣೆ.

**ಓದಲಾಗಿದೆ :** ಶ್ರೀ ನಾರಾಯಣ ಸೇರಿಗಾರ್, ಯು. ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಕ್ಕಮಗಳೂರು ಇವರ ಮನವಿ ದಿನಾಂಕ : 04–12–2008.

**ಪ್ರಸ್ತಾವನೆ:**

ಶ್ರೀ ನಾರಾಯಣ ಸೇರಿಗಾರ್, ಯು. ಸಹಾಯಕ ಸರ್ಕಾರಿ ಅಭಿಯೋಜಕರು, ಸಿವಿಲ್ ಜಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಚಿಕ್ಕಮಗಳೂರು ಇವರು ದಿನಾಂಕ 04–12–2008ರಂದು ಸರ್ಕಾರಕ್ಕೆ ಅರ್ಜಿ ಸಲ್ಲಿಸಿ ಕರ್ನಾಟಕ ಸರ್ಕಾರಿ ನೌಕರರ (ವಯೋ ನಿರ್ಧಾರ) ತಿದ್ದುಪಡಿ ಕಾಯಿದೆ 1974ರ ಕಲಂ 5ರಡಿಯಲ್ಲಿ ಸರ್ಕಾರಿ ಸೇವೆಯ ಉದ್ದೇಶಕ್ಕಾಗಿ ತಮ್ಮ ಸೇವಾ ಪುಸ್ತಕದಲ್ಲಿ ಮತ್ತು ಸರ್ಕಾರಿ ಸೇವೆಯ ಎಲ್ಲಾ ದಾಖಲಾತಿಗಳಲ್ಲಿ ಅವರ ಜನ್ಮ ದಿನಾಂಕವಾದ 22–09–1962ರ ಬದಲಾಗಿ 22–09–1963 ಎಂದು ತಿದ್ದುಪಡಿ ಮಾಡಿ ಆದೇಶ ಹೊರಡಿಸಲು ಕೋರಿದ್ದರು.

ಈ ಮನವಿಯನ್ನು ಸರ್ಕಾರವು ಪರಿಶೀಲಿಸುವ ಸಂದರ್ಭದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕ ವೃಂದದ ಅನೇಕ ಅಧಿಕಾರಿಗಳು ಈ ರೀತಿ ತಮ್ಮ ಜನ್ಮ ದಿನಾಂಕದ ಬದಲಾವಣೆಗೆ ಮನವಿ ಸಲ್ಲಿಸುತ್ತಿದ್ದು ಬೇರೆ ಇಲಾಖೆಗಳಲ್ಲಿ ಈ ಪ್ರವೃತ್ತಿ ಇಷ್ಟು ಸಂಖ್ಯೆಯಲ್ಲಿ ಇಲ್ಲದೇ ಇರುವುದನ್ನು ಮನಗಂಡಿತು. ಇದರಲ್ಲಿ ಅನುಮಾನಾಸ್ಪದವಾದ ನಡವಳಿಕೆಯಿದೆ ಎಂಬ ಅನುಮಾನ ಬರುತ್ತದೆ. ಈ ಹಿನ್ನೆಲೆಯಲ್ಲಿ ಕಳೆದ 5 ವರ್ಷದಿಂದ ಈ ಬಗ್ಗೆ ಬಂದಿರುವ ಎಲ್ಲಾ ಅರ್ಜಿಗಳನ್ನು/ಕಡತಗಳನ್ನು ಪರಿಶೀಲಿಸಿ ವಿಚಾರಣೆ ನಡೆಸಲು ಸಿ.ಐ.ಡಿ.ಗೆ ವಹಿಸಿ ಕೊಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಒಇ 87 ಸಿಐಡಿ 2010, ಬೆಂಗಳೂರು, ದಿನಾಂಕ : 04–06–2010**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಕಳೆದ 5 ವರ್ಷದಿಂದ ಈ ಬಗ್ಗೆ ಅಭಿಯೋಜನೆ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶನಾಲಯದಲ್ಲಿ ಜನ್ಮ ದಿನಾಂಕದ ಪರಿಷ್ಕರಣೆಗಾಗಿ ಬಂದಿರುವ ಎಲ್ಲಾ ಅರ್ಜಿಗಳನ್ನು/ಕಡತಗಳನ್ನು ಪರಿಶೀಲಿಸಿ ವಿಚಾರಣೆ ನಡೆಸಲು ಸಿ.ಐ.ಡಿ.ಗೆ ವಹಿಸಿಕೊಡಲು ಆದೇಶಿಸಲಾಗಿದೆ.

ನಿರ್ದೇಶಕರು, ಅಭಿಯೋಗಗಳು ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಕಳೆದ 5 ವರ್ಷಗಳಲ್ಲಿ ಸ್ವೀಕೃತವಾಗಿರುವ ಎಲ್ಲಾ ಅರ್ಜಿಗಳನ್ನು ಸಿ.ಐ.ಡಿ.ಗೆ ವರ್ಗಾಯಿಸುವುದರ ಜೊತೆಗೆ ತಂಡಕ್ಕೆ ಅಗತ್ಯ ಮಾಹಿತಿ ಹಾಗೂ ದಾಖಲೆಗಳನ್ನು ಒದಗಿಸತಕ್ಕದ್ದು.

ಸಿ.ಐ.ಡಿ.ಯು ಈ ಬಗ್ಗೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1435

**ಪಿ. ಶಿವರಾಮಭಟ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ(ಅಪರಾಧಗಳು)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ**

**ಸುತ್ತೋಲೆ**

ಸಂ. ಗ್ರಾಅಪ 04 ಎಸ್ ಇಪಿ (ಇತರೆ) 2010 ಬೆಂಗಳೂರು, ದಿನಾಂಕ : 18ನೇ ಜೂನ್ 2010

**ವಿಷಯ :** "ಸಾಕ್ಷರ ಭಾರತ ಕಾರ್ಯಕ್ರಮ–2009–10" ಆಂದೋಲನದಲ್ಲಿ ಎಸ್ ಜಿಎಸ್ ವೈ ಸ್ವಸಹಾಯ ಸಂಘಗಳ ಭಾಗವಹಿಸುವಿಕೆಯ ಬಗ್ಗೆ.

**ಉಲ್ಲೇಖ :** ಕೇಂದ್ರ ಸರ್ಕಾರದ ಉಪಕಾರ್ಯದರ್ಶಿ (ಎಸ್ ಜಿಎಸ್ ವೈ–I), ರವರ ಸರ್ಕಾರಿ ಪತ್ರದ ಸಂಖ್ಯೆ : L. 11025/01/2010-SGSY-I, ದಿನಾಂಕ : 25–05–2010

ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಮಂತ್ರಾಲಯವು 'ಸಾಕ್ಷರ ಭಾರತ ಕಾರ್ಯಕ್ರಮ–2009–10' ನ್ನು ರಾಜ್ಯದ ಬಾಗಲಕೋಟೆ, ಬೆಂಗಳೂರು (ಗ್ರಾ), ಬೆಳಗಾಂ, ಬೀದರ್, ಬಳ್ಳಾರಿ, ಚಾಮರಾಜನಗರ, ತುಮಕೂರು, ಮೈಸೂರು, ಕೋಲಾರ, ಚಿತ್ರದುರ್ಗ, ಬಿಜಾಪುರ, ಹಾವೇರಿ, ಗದಗ, ರಾಯಚೂರು, ಕೊಪ್ಪಳ ಮತ್ತು ಮಂಡ್ಯ ಜಿಲ್ಲಾ ಪಂಚಾಯತಿಗಳಲ್ಲಿ ಜಾರಿಗೊಳಿಸಲು ನಿರ್ಧರಿಸಿದೆ. ಈ ಯೋಜನೆಯ ಮೂಲ ಉದ್ದೇಶ ರಾಷ್ಟ್ರಾದ್ಯಂತ ಅನಕ್ಷರತೆಯನ್ನು ಹೋಗಲಾಡಿಸುವುದು.

ಈ ನಿಟ್ಟಿನಲ್ಲಿ, ಗ್ರಾಮ ಪಂಚಾಯತ್ ಮತ್ತು ತಾಲ್ಲೂಕು ಮಟ್ಟಗಳಲ್ಲಿ ಸಭೆಗಳನ್ನು ನಡೆಸಿ ಸಾಕ್ಷರತೆಯ ಅರಿವು ಹಾಗೂ ಜಾಗೃತಿಯನ್ನು ಮೂಡಿಸುವುದು, ಅದರಲ್ಲೂ ವಿಶೇಷವಾಗಿ ಮಹಿಳೆಯರು ಹೆಚ್ಚಾಗಿ ಭಾಗಿಯಾಗುವಂತಹ ಕಾರ್ಯಕ್ರಮಗಳನ್ನು ರೂಪಿಸುವುದು. ಸಾಕ್ಷರತಾ ಆಂದೋಲನದಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ರಚಿಸಲಾಗಿರುವ ಸ್ವಸಹಾಯ ಸಂಘಗಳ ಗುಂಪುಗಳನ್ನು ಸಹ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡಿ 'ಸಾಕ್ಷರ ಭಾರತ ಕಾರ್ಯಕ್ರಮ–2009–10' ವನ್ನು ಯಶಸ್ವಿಗೊಳಿಸಲು ತ್ವರಿತವಾಗಿ ಕ್ರಮ ವಹಿಸುವಂತೆ ಸೂಚಿಸಿದೆ.

**(ಡಿ. ಕೆ. ರಂಗಸ್ವಾಮಿ)**

ನಿರ್ದೇಶಕರು (ಸ್ವಉಕಾ)
ಹಾಗೂ ಪ/ನಿ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

ಪಿ.ಆರ್. 1682

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಧಾರವಾಡ ಜಿಲ್ಲೆ, ಧಾರವಾಡ ತಾಲ್ಲೂಕಿನ ತಡಕೋಡ ಕೆರೆ ಬ್ಲಾಕ್ ನಂ. 101 ನ್ನು ಸಣ್ಣ ನೀರಾವರಿ ಇಲಾಖೆಗೆ ಹಸ್ತಾಂತರಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಧಾರವಾಡ ಇವರ ಆದೇಶ ಸಂಖ್ಯೆ : ದಾಜಿಪಂ/ಉಕಾ/ಸಿ–2/ಕೆರೆ/2008–09/3098 ದಿನಾಂಕ 06/01/2009.

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತು ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–3/2009–10/1862, ದಿನಾಂಕ: 20–03–2010.

**ಪ್ರಸ್ತಾವನೆ :**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಧಾರವಾಡ ರವರು ಧಾರವಾಡ ತಾಲ್ಲೂಕಿನ ತಡಕೋಡ ಗ್ರಾಮದ ನೀರಾವರಿ ಕೆರೆಯ ಬ್ಲಾಕ್ ನಂ. 101 ಕ್ಷೇತ್ರ 101 ಎಕರೆ 27 ಗುಂಟೆ ಪ್ರದೇಶದ ಜಮೀನುಗಳಿಗೆ ನೀರಾವರಿ ಆಗುತ್ತಿದ್ದು, ಸದರಿ ಕೆರೆಯ ವಿಸ್ತೀರ್ಣ 41–15 ಹೆಕ್ಟೇರ್ ಪ್ರದೇಶವಾಗಿರುತ್ತದೆ. ಇಂತಹ ದೊಡ್ಡ ಕೆರೆಯನ್ನು ಗ್ರಾಮ ಪಂಚಾಯ್ತಿಯಿಂದ ಅಭಿವೃದ್ಧಿಪಡಿಸಲು ಹಾಗೂ ನಿರ್ವಹಣೆ ಮಾಡಲು ಸಾಕಷ್ಟು ಹಣದ ಕೊರತೆ ಇರುವುದರಿಂದ ಸದರಿ ಕೆರೆಯನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ : 06–01–2009 ರ ಆದೇಶದಲ್ಲಿ ಸಣ್ಣ ನೀರಾವರಿ ಇಲಾಖೆಗೆ ವರ್ಗಾಯಿಸಿರುತ್ತಾರೆ.

ಸದರಿ ಕೆರೆಯ ಸುಧಾರಣೆಗಾಗಿ ಸಣ್ಣ ನೀರಾವರಿ ಇಲಾಖೆಯಿಂದ ಅಂದಾಜು ಮೊತ್ತ ರೂ. 50.00 ಲಕ್ಷಗಳಿಗೆ ಅಂದಾಜು ಪಟ್ಟಿ ತಯಾರಿಸಲಾಗಿದ್ದು ಹಾಗೂ ಈ ಕಾಮಗಾರಿಗೆ ಆರ್.ಐ.ಡಿ.ಎಫ್–15ರಡಿ ಸಾಲ ಸೌಲಭ್ಯ ದೊರೆತಿದೆ. ಆದ್ದರಿಂದ ಈ ಕೆರೆಯ ಸುಧಾರಣೆಯನ್ನು ಸಣ್ಣ ನೀರಾವರಿ ಇಲಾಖೆಯಿಂದ ಕೈಗೊಳ್ಳಲು ಧಾರವಾಡ ತಾಲ್ಲೂಕಿನ ತಡಕೋಡ ಗ್ರಾಮ ಪಂಚಾಯ್ತಿಯಿಂದ ಹಸ್ತಾಂತರಿಸಿಕೊಳ್ಳಲು ಮೇಲೆ (2) ರಲ್ಲಿ ಓದಲಾದ ದಿನಾಂಕ 20–03–2010 ರ ಪತ್ರದಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಅಭಿಯಂತರರವರು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 2 ಕೆಜಿದು 2010, ಬೆಂಗಳೂರು, ದಿನಾಂಕ: 28 ನೇ ಜೂನ್ 2010.**

ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಧಾರವಾಡ ಜಿಲ್ಲೆ, ಧಾರವಾಡ ತಾಲ್ಲೂಕಿನ ಬ್ಲಾಕ್ ನಂ. 101 ರಲ್ಲಿನ ತಡಕೋಡ ಕೆರೆ ಅಭಿವೃದ್ಧಿ ಕಾಮಗಾರಿಯನ್ನು ಸಣ್ಣ ನೀರಾವರಿ ಇಲಾಖೆಯಿಂದ ಕೈಗೊಳ್ಳುವ ಸಲುವಾಗಿ ಜಿಲ್ಲಾ ಪಂಚಾಯತ್‌ನಿಂದ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಗೆ ಹಸ್ತಾಂತರಿಸಿಕೊಳ್ಳಲು ಸರ್ಕಾರವು ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1683

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಕೋಸ್ಟ್‌ಗಾರ್ಡ್, ಪೊಲ್ಯೂಶನ್ ರೆಸ್‌ಪಾನ್ಸ್ ಟೀಮ್, ಮುಂಬೈ ಇವರು ದಿನಾಂಕ 19-07-2010 ರಿಂದ 23-07-2010 ರವರೆಗೆ ಏರ್ಪಡಿಸಿರುವ ತರಬೇತಿಗೆ ಕ್ಯಾಪ್ಟನ್ ಸಿ ಸ್ವಾಮಿ, ಬಂದರು ಅಧಿಕಾರಿ, ಕಾರವಾರ ಅವರನ್ನು ನಿಯೋಜಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇವರ ಪತ್ರ ಸಂಖ್ಯೆ ಬಂಒಜಸಾ 73/ಸಿಬ್ಬಂದಿ-2/2010 ದಿನಾಂಕ: 24-05-2010.

ಪ್ರಸ್ತಾವನೆ :

ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 24-05-2010 ರ ಪತ್ರದಲ್ಲಿ ಕೋಸ್ಟ್‌ಗಾರ್ಡ್ ಪೊಲ್ಯೂಶನ್ ರೆಸ್‌ಪಾನ್ಸ್ ಟೀಮ್ (ಡಬ್ಲ್ಯೂ) ಅವರ ದಿನಾಂಕ 04-04-2010 ರ ಪತ್ರವನ್ನು ಉಲ್ಲೇಖಿಸಿ ಸದರಿ ಸಂಸ್ಥೆ ದಿನಾಂಕ 19-07-2010 ರಿಂದ 23-07-2010 ರವರೆಗೆ ಏರ್ಪಡಿಸಿರುವ ತರಬೇತಿಗೆ ಕ್ಯಾಪ್ಟನ್ ಸಿ ಸ್ವಾಮಿ, ಬಂದರು ಅಧಿಕಾರಿ, ಕಾರವಾರ ಅವರನ್ನು ನಿಯೋಜಿಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 24 ಬನೌಸೇ 2010, ಬೆಂಗಳೂರು, ದಿನಾಂಕ 26-06-2010**

ಕೋಸ್ಟ್‌ಗಾರ್ಡ್ ಪೊಲ್ಯೂಶನ್ ರೆಸ್‌ಪಾನ್ಸ್ ಟೀಮ್, ಮುಂಬೈ ಇವರು ದಿನಾಂಕ 19-07-2010 ರಿಂದ 23-07-2010 ರವರೆಗೆ ಏರ್ಪಡಿಸಿರುವ ತರಬೇತಿ ಕಾರ್ಯಕ್ರಮಕ್ಕೆ ಕ್ಯಾಪ್ಟನ್ ಸಿ. ಸ್ವಾಮಿ, ಬಂದರು ಅಧಿಕಾರಿ, ಕಾರವಾರ ಇವರನ್ನು ನಿಯೋಜಿಸಲು ಅನುಮೋದನೆ ನೀಡಲಾಗಿದೆ ಹಾಗೂ ಕ್ಯಾಪ್ಟನ್ ಸಿ. ಸ್ವಾಮಿ, ಬಂದರು ಅಧಿಕಾರಿ, ಕಾರವಾರ ಅವರು ಸದರಿ ತರಬೇತಿಗೆ ಹಾಜರಾದಲ್ಲಿ, ತರಬೇತಿಗೆಂದು ನಿಗದಿಪಡಿಸಿರುವ ಶುಲ್ಕ ರೂ. 1200.00 ಮತ್ತು ಸದರಿಯವರ ಹುದ್ದೆಗೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ/ದಿನ ಭತ್ಯೆ ಪಡೆಯಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1684

**ಜಿ. ಸಿದ್ದಗಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರುಗಳು ಮತ್ತು
ಒಳನಾಡು ಜಲಸಾರಿಗೆ ಇಲಾಖೆ
(ಸೇವೆಗಳು-ಸಿ)

## ಶಿಕ್ಷಣ ಸಚಿವಾಲಯ

**ವಿಷಯ :** ಯಲಹಂಕ ಹಳೇ ಬಸ್ ನಿಲ್ದಾಣದ ಪಕ್ಕದ ಸರ್ಕಾರಿ ಪ್ರಾಥಮಿಕ ಶಾಲೆಯನ್ನು ಸ್ಥಳಾಂತರ ಮಾಡಿ ಆ ಜಾಗವನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಬಿಟ್ಟುಕೊಡುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ. ಬೆಂಗಳೂರುರವರ ಪತ್ರ ಸಂಖ್ಯೆ : ಸಂ. ಬೆಂಮಸಾಸಂ/ಕೇಕ/ವಾಣಿಜ್ಯ/ಆಸ್ತಿ/4672/2009–10, ದಿನಾಂಕ : 10–02–2010.

**ಪ್ರಸ್ತಾವನೆ :**

1. ಮೇಲೆ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ. ಬೆಂಗಳೂರು ರವರು ಯಲಹಂಕದಲ್ಲಿನ ಹಳೇ ಬಸ್ ನಿಲ್ದಾಣದ ಪಕ್ಕದಲ್ಲಿನ ಸರ್ಕಾರಿ ಪ್ರಾಥಮಿಕ ಶಾಲೆಯ ಜಾಗವನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ವಹಿಸುವಂತೆ ಕೋರಿರುತ್ತಾರೆ. ಮುಂದುವರೆದು ಯಲಹಂಕ ಕ್ಷೇತ್ರದ ಸನ್ಮಾನ್ಯ ಶಾಸಕರು, ರವರು ಯಲಹಂಕ ಸರ್ಕಾರಿ ಪ್ರಾಥಮಿಕ ಶಾಲೆಯನ್ನು ಸಮೀಪದ ಬಾಂಗ್ಲ ಸರ್ಕಾರಿ ಪ್ರಾಥಮಿಕ ಶಾಲೆಗೆ ಸ್ಥಳಾಂತರಿಸಲು ಮಾನ್ಯ ಶಿಕ್ಷಣ ಸಚಿವರನ್ನು ಕೋರಿರುವುದಾಗಿ ತಿಳಿಸಿರುತ್ತಾರೆ.

2. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 134 ಯೋಸಕ 2010 ಬೆಂಗಳೂರು, ದಿನಾಂಕ: 18–06–2010.**
**[ಇಡಿ 75 ಸ್ವೀಮರ (ಯುನಿಕ್) 2010, ದಿನಾಂಕ : 18–06–2010]**

ಯಲಹಂಕ ಹಳೇ ಬಸ್ ನಿಲ್ದಾಣದ ಪಕ್ಕದ ಸರ್ಕಾರಿ ಪ್ರಾಥಮಿಕ ಶಾಲೆಯ ಜಾಗವನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಹೊಸ ಬಸ್ ನಿಲ್ದಾಣವನ್ನು ನಿರ್ಮಿಸಲು ನಿಯಮಾನುಸಾರ ಹಾಲಿ ಇರುವ ಮಾರುಕಟ್ಟೆ ದರದಂತೆ ಪರಿಹಾರದ ಹಣವನ್ನು ಪಡೆದು ಬಿಎಂಟಿಸಿಗೆ ಜಾಗ ಹಸ್ತಾಂತರಿಸಲು ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರಿಗೆ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1685

**ಐ. ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ).

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ಕಂದಾಯ ತಾಲ್ಲೂಕಿನ ಹೆಚ್ಚುವರಿಯಾಗಿ ಸೃಜನೆ ಮಾಡಲಾದ ನೋಟರಿ ಹುದ್ದೆಯನ್ನು ಭರ್ತಿ ಮಾಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ : ಲಾ 121 ಎಲ್‌ಸಿಎಲ್ 09 ದಿನಾಂಕ 16/11/2009.
2. ಸರ್ಕಾರದ ಪತ್ರ ಸಂಖ್ಯೆ : ಲಾ 121 ಎಲ್‌ಸಿಎಲ್ 09 ದಿನಾಂಕ 17/12/2009 ಹಾಗೂ 05–03–2010.
3. ಪ್ರಧಾನ ಮತ್ತು ಸತ್ರ ನ್ಯಾಯಾಧೀಶರು, ಶಿವಮೊಗ್ಗ ಇವರ ಪತ್ರಗಳು
   (ಅ) ಸಂಖ್ಯೆ ಆಡಳಿತ/ಜಿಸನ್ಯಾ/3450/2010 ದಿನಾಂಕ 11/12–03–2010.
   (ಆ) ಸಂಖ್ಯೆ ಆಡಳಿತ/ಜಿಸನ್ಯಾ/4234/2010 ದಿನಾಂಕ 31–03–2010/01–04–2010.
4. ನೋಟರಿಗಳ ತಿದ್ದುಪಡಿ ನಿಯಮಗಳು 2009 ರ ಅಧಿಸೂಚನೆ ಸಂ. GSR 114 (E) ದಿನಾಂಕ 24–02–2009.
5. ಅಧಿಸೂಚನೆ ಲಾ 61 ಎಲ್‌ಸಿಎಲ್ 09 ದಿನಾಂಕ 18–07–2009.
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 121 ಎಲ್‌ಸಿಎಲ್ 09 ದಿನಾಂಕ 19–04–2010.

**ಪ್ರಸ್ತಾವನೆ :**

ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ಕಂದಾಯ ತಾಲ್ಲೂಕಿನಲ್ಲಿ ಹೆಚ್ಚುವರಿಯಾಗಿ ಒಂದು ನೋಟರಿ ಹುದ್ದೆಯನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ 16–11–2009 ರಲ್ಲಿ ಸೃಜಿಸಲಾಗಿರುತ್ತದೆ.

ಸದರಿ ನೋಟರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಶಿವಮೊಗ್ಗ ಇವರನ್ನು ಮೇಲೆ (2) ರಲ್ಲಿ ಓದಲಾದ ದಿನಾಂಕ 17–12–2009 ಹಾಗೂ 05–03–2010 ರ ಪತ್ರಗಳಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (3) ರಲ್ಲಿ ಓದಲಾದ ದಿನಾಂಕ 12–03–2010 ರ ಪತ್ರದಲ್ಲಿ 06 ಜನರಲ್ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ (4) ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು 2009 ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ (5) ರಲ್ಲಿ ಓದಲಾದ ದಿನಾಂಕ 18–07–09 ರ ಅಧಿಸೂಚನೆಯಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (6) ರಲ್ಲಿ ಓದಲಾದ ದಿನಾಂಕ 19–04–2010 ರ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ದಿನಾಂಕ 12–05–2010 ರಂದು ಆಯ್ಕೆ ಪಟ್ಟಿಯನ್ನು ಸಲ್ಲಿಸಿದೆ.

ಸಂದರ್ಶನಾ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 121 ಎಲ್‌ಸಿಎಲ್ 2009, ಬೆಂಗಳೂರು, ದಿನಾಂಕ: 23–06–2010.**

ನೋಟರಿ ಅಧಿನಿಯಮ (1952) ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು (1956) ಹಾಗೂ ತಿದ್ದುಪಡಿ ನಿಯಮಗಳು 2009 ರನ್ವಯ ನಿಯಮ 8 (1) ರಲ್ಲಿ ಪ್ರದತ್ತವಾಗಿರುವ ಅಧಿಕಾರದಂತೆ ಶ್ರೀ ಬಿ. ಸೀತಾರಾಮ, ವಕೀಲರು, 1ನೇ ಕ್ರಾಸ್, ರಾಘವೇಂದ್ರ ಎಕ್ಸ್‌ಟೆನ್ಷನ್ ಸೊಪ್ಪುಗುಡ್ಡೆ, ಅನುರಾಧ ನರ್ಸಿಂಗ್ ಹೋಂ ರೋಡ್, ಸೊಪ್ಪುಗುಡ್ಡೆ, ತೀರ್ಥಹಳ್ಳಿ, ಶಿವಮೊಗ್ಗ–577432 ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ತೀರ್ಥಹಳ್ಳಿ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952) ರ ಕಲಂ 4 ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1686

**ಎಸ್. ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ–2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ